

# ಚಂದಮಾಮ

ಸೆಪ್ಟೆಂಬರ್ 1985



## ಈ ಸಂಚಿಕೆಯಲ್ಲಿ





ಬಿಡಿ ಪ್ರತಿ ರೂ. ೨-೦೦

ವಾರ್ಷಿಕ ಚಂದಾ ರೂ. ೨೪-೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಸಾಧಾರಣವಾಗಿ ಆಶೆಗಳಿಲ್ಲದ ಮನುಷ್ಯರೇ ಇಲ್ಲ. ಮನುಷ್ಯರ ಜೀವಿತವು ಆಶಾವಾದದಿಂದಲೇ ಚಲಿಸಿಕೊಂಡು ಹೋಗುವಂತಹುದು. ಎಲ್ಲದಕ್ಕೂ ಹದ್ದೊಂದಿದೆ, ಹದ್ದು ಮೀರಿದ ಆಶೆಯುಳ್ಳವರು ಆಶಾಪಾತಕರಾಗಿರುತ್ತಾರೆ. ಅಂತಹವರಿಗೆ ತೃಪ್ತಿಯೇ ಇರದು. ತೃಪ್ತಿ ಎಂದರೆ ಏನೆಂದೇ ಅವರಿಗೆ ಗೊತ್ತಿರುವುದಿಲ್ಲ. ಅಂಥವರಿಗೆ ಗತ ಜೀವಿತವನ್ನು ನೆನಪಿಗೆ ತಂದರೆ ಬದಲಾವಣೆಯಾಗುವ ಅವಕಾಶವಿದೆ, ಎಂಬುದನ್ನು "ತೀರದ ಕೋರಿಕೆ" ಎಂಬ ಕಥೆಯಲ್ಲಿ ನೋಡಬಹುದು.

## ಅಮರವಾಣಿ

ಬಹಿರ್ಮರೀಚಂ ಮಲಿನ ಮಂತಸ್ಸಾರಂ ಹಿ ದೃಶ್ಯತೇ
ವಿಕಾರರೂಪೋಪಿ ಬುಧಃ ಹೃದಿ ಪ್ರಜ್ಞಾನ್ವಿತಃ ಖಲು

ರೂಪವನ್ನು ನೋಡಿ ಅಂತಃಸಾರವನ್ನು ತಿಳಿಯಲಾರೆವು. ಒಳ್ಳೆ ಮೆಣಸು ಕಪ್ಪಾಗಿದ್ದರೂ, ಅದರ ರುಚಿ ಖಾರವಾಗಿರುತ್ತದೆ. ವಿಕಾರ ರೂಪದ ಮಹಾಪಂಡಿತರನೇಕರನ್ನು ನಾವು ನೋಡುತ್ತೇವೆ.

ಸಂಪುಟ : ೧೬ ಸೆಪ್ಟೆಂಬರ್ '೮೬ ಸಂಚಿಕೆ : ೩
ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ಕಳ್ಳರನ್ನು ಹಿಡಿದ ಗಿಣಿ

ಒಂದುಸಾರಿ ಸಂಪದ್ಭರಿತವಾದ ಒಂದು ಮನೆಯಲ್ಲಿ ದೊಡ್ಡದೊಂದು ಕಳ್ಳತನವಾಯಿತು. ಯಾರು ಕಳ್ಳತನ ಮಾಡಿದ್ದೆಂದು ಸ್ವಲ್ಪವೂ ಗೊತ್ತಾಗಲಿಲ್ಲ. ಆ ಮನೆಯ ಯಜಮಾನಿ ಸಾಕುತ್ತಿದ್ದ ಒಂದು ಗಿಣಿ "ರೋಸೀ ಇಲ್ಲಿ ಬಾ. ರಾಬರ್ಟ್ ಇಲ್ಲಿ ಬಾ" ಎಂದು ಪದೇ ಪದೇ ನುಡಿಯುವುದನ್ನು ಕೇಳಿ, ಪೋಲೀಸಿಗೆ ತಿಳಿಸಿದಳು. ಡಕಾಯಿತರೆಂದು ಪೋಲೀಸು ರಿಕಾರ್ಡುಗಳಲ್ಲಿ ದಾಖಲೆಯಾಗಿದ್ದ ರೋಸಿ ಮತ್ತು ರಾಬರ್ಟ್ ಎಂಬುವರನ್ನು ಪೋಲೀಸರು ಅರೆಸ್ಟು ಮಾಡಿದರು. ಮನೆಯಲ್ಲಿ ಯಾರೂ ಇಲ್ಲವೆಂದು ಆ ಕಳ್ಳರಿಬ್ಬರೂ ಒಬ್ಬರನ್ನೊಬ್ಬರು ಗಟ್ಟಿಯಾಗಿ ಕರೆಯುತ್ತಿದ್ದುದನ್ನು ಕೇಳಿದ ಆ ಗಿಣಿ ಆ ಮಾತುಗಳನ್ನೇ ಉರು ಹಾಕ ತೊಡಗಿತ್ತು.

## ಕರಗಿಹೋಗುವ ಲೋಹ



ನ್ಯೂ ಹಾಂಪ್‌ಷೈರ್‌ನಲ್ಲಿಯ ಒಂದು ಕಂಪೆನಿ ಹೊಸ ಲೋಹವನ್ನು ಕಂಡು ಹಿಡಿದಿದೆ. ಇದು ಲೋಹವೇ ಆದರೂ ನೀರಿನಲ್ಲಿ ಹಾಕಿಬಿಟ್ಟರೆ ಹನ್ನೆರಡು ನಿಮಿಷಗಳಲ್ಲಿ ಕರಗಿ, ಇದ್ದ ಜಾಗ ತಿಳಿಯದೆ ಹೋಗುತ್ತದೆ.



## ಮುಳುಗಿಹೋದ ನಗರ



ಶ್ರೀ ಕೃಷ್ಣನ ನಿರ್ಯಾಣದ ಅನಂತರ ದ್ವಾರಕಾ ನಗರವು ಸಮುದ್ರಮಯವಾದಂತೆ ಮಹಾ ಭಾರತವು ಹೇಳುತ್ತದೆ. ಇತ್ತೀಚೆಗೆ ಡಾ॥ ಎಸ್. ಆರ್. ರಾವ್ ಅವರ ಮುಖಂಡತೆಯಲ್ಲಿ ಪುರಾವಸ್ತು ಶಾಖೆಯ ಅಗೆತದ ಸಂಶೋಧನೆಯಲ್ಲಿ ನಿಜವಾಗಿಯೇ ಕ್ರಿ.ಪೂ. ೧೫೦೦ ಸಂವತ್ಸರಕ್ಕೆ ಸೇರಿದ ಪುರಾತನ ನಗರವು ಸಮುದ್ರದಲ್ಲಿ ಮುಳುಗಿ ಹೋದುದನ್ನು ತಿಳಿಯಪಡಿಸುತ್ತದೆ.

## ನಿಮಗೆ ಗೊತ್ತೇ?

೧. ಭೂಮಿ ಗುಂಡಗಿರುವುದೆಂಬ ತನ್ನ ವಿಶ್ವಾಸವನ್ನು ಮೊತ್ತಮೊದಲು ವ್ಯಕ್ತ ಪಡಿಸಿದವರಾರೆಂದು ನಿಮಗೆ ಗೊತ್ತೇ ?

೨. ಮೊತ್ತಮೊದಲು ಭೂಮಿಯ ಸುತ್ತಳತೆಯನ್ನು ಲೆಕ್ಕ ಮಾಡಿದವರು ಯಾರು ?

೩. ಧ್ರುವಪ್ರಾಂತ್ಯಗಳಲ್ಲಿರುವುದಕ್ಕಿಂತ ಭೂಮಧ್ಯ ರೇಖೆಗೆ ಸಮೀಪದಲ್ಲಿರುವ ವಸ್ತುಗಳ ಭಾರವು ಕಡಿಮೆಯಾಗಿರುತ್ತದೆ, ಏತರಿಂದ ?

೪. ಪ್ರಪಂಚದೊಳಗೆಲ್ಲಾ ದೊಡ್ಡದಾದ ಕೃತ್ರಿಮ ರೇವು - ಪಟ್ಟಣವು ಎಲ್ಲಿರುವುದೆಂದು ನಿಮಗೆ ಗೊತ್ತೇ ?

೫. ಪ್ರಪಂಚದೊಳಗೆಲ್ಲಾ ದೊಡ್ಡ ಮರುಭೂಮಿ ಸಹಾರಾ. ಹಾಗಾದರೆ ಎರಡನೇ ದೊಡ್ಡ ಮರು ಭೂಮಿ ಎಲ್ಲಿದೆ ?

(ಉತ್ತರ ೬೫ ನೇ ಪುಟದಲ್ಲಿ)

**ಪುರಾಣಗಾಥಾವಳಿ :**

# ಅಜಾಮಿಳ

**ಪೂ**ರ್ವಕಾಲದಲ್ಲಿ ಕನ್ಯಾಕುಬ್ಜದಲ್ಲಿ ಅಜಾಮಿಳನೆಂಬ ಬ್ರಾಹ್ಮಣನೊಬ್ಬನಿದ್ದನು. ಚಿಕ್ಕಂದಿನಲ್ಲಿ ಸತ್ಪ್ರವರ್ತನೆ ಸದಾಚಾರಗಳಲ್ಲೇ ಇದ್ದನು. ಪ್ರಾಯಪ್ರಬುದ್ಧನಾದ ಮೇಲೆ ಒಂದು ದಿನ ಅವನು ಪುಷ್ಪವನದಿಂದ ಹೂಗಳನ್ನು ಕೊಯ್ದುಕೊಂಡು ಹಿಂದಿರುಗುವಾಗ, ದಾರಿಯಲ್ಲಿ ಜೂಜು, ಮದ್ಯಪಾನ ಮೊದಲಾದ ದುರ್ವ್ಯಸನಗಳಿಂದ ಸ್ವೇಚ್ಛೆಯಾಗಿರುವ ಕೆಲವರನ್ನು ನೋಡಿದನು.

ಅವರ ಆನಂದವು ಅವನನ್ನು ಬಹಳವಾಗಿ ಆಕರ್ಷಿಸಿತು.

ಆ ಕ್ಷಣದಿಂದ ಅವನ ಮನಸ್ಸು ಅಡ್ಡದಾರಿ ಹಿಡಿಯಿತು. ಮನೆಬಾಗಿಲುಗಳ ಗೊಡವೆಬಿಟ್ಟನು. ಕಳ್ಳು ಮಾರುತ್ತ ಧರ್ಮ ವಿರುದ್ಧ ಕೆಲಸಮಾಡುವ ಸ್ತ್ರೀಯೊಬ್ಬಳನ್ನು ಮದುವೆಯಾಗಿ ವಿಲಾಸ ಜೀವಿತವನ್ನು ನಡೆಸಿದನು. ಅವಳಿಂದ ಅವನಿಗೆ ಎಂಟು ಮಂದಿ ಮಕ್ಕಳಾದರು. ಕೊನೆಯ ಮಗನಿಗೆ ನಾರಾಯಣನೆಂದು ಹೆಸರಿಟ್ಟರು.

ಅಜಾಮಿಳನು ಮುದುಕನಾಗಿ ರೋಗದಲ್ಲಿ ಬಿದ್ದು ನರಳ ತೊಡಗಿದನು. ಆಗ ಪಕ್ಕದ ಮನೆಯ ಪಠಾರದೊಳಗಿನ ಒಬ್ಬನ ಜೀವ ಕೊಂಡೊಯ್ಯಲು ಬರುವ ಯಮದೂತರು ಅವನಿಗೆ ಕಾಣಿಸಿ, ಮರಣ ಭೀತಿಯಿಂದ ತನ್ನ ಪ್ರೀತಿಯ ಚಿಕ್ಕ ಮಗನಿಗಾಗಿ "ನಾರಾಯಣಾ......" ಎಂದು ಎರಡು ಸಾರಿ ಆರ್ತನಾದ ಮಾಡಿದನು. ಆ ಕೂಡಲೇ ವಿಷ್ಣುದೂತರು ಓಡಿಬಂದು ಅಜಾಮಿಳನ ಪಕ್ಕದಲ್ಲಿ ನಿಂತರು. ಅವರನ್ನು ನೋಡಿ ಯಮದೂತರು ಆಶ್ಚರ್ಯದಿಂದ ಸ್ವಲ್ಪ ನಿಂತು, "ಇಂಥಾ ಮಹಾ ಪಾಪಿಯ ಹತ್ತಿರ ನೀವೇಕೆ ಬಂದಿರಿ ?" ಎಂದು ಅವನ ಪಾಪಗಳನ್ನು ಕುರಿತು ಹೇಳಿದರು. "ಆದರೂ ಇವನು ನಾರಾಯಣನನ್ನು ನೆನೆಯುವ ಮಹಾವಿಷ್ಣು ಭಕ್ತನು" ಎಂದರು ದೇವದೂತರು. ಅವರ ವಾದ ಪ್ರತಿವಾದಗಳು ಸ್ಮೃತಿ ತಪ್ಪಿದಂತಿದ್ದ ಅಜಾಮಿಳನ ಕಿವಿಗೆ ಮೆಲ್ಲನೆ ಕೇಳುತ್ತಲೇ ಇದ್ದುವು. ಅವುಗಳನ್ನು ಕೇಳುತ್ತ ತಾನು ಎಂತಹ ಪಾಪ ಜೀವಿತವನ್ನು ಕಳೆದೆನೆಂದು ಪಶ್ಚಾತ್ತಾಪ ಪಡತೊಡಗಿದನು. "ನಾರಾಯಣ" ಸ್ಮರಣೆಯನ್ನೂ ಮಾಡತೊಡಗಿದನು. ಯಮದೂತರು ಆಶ್ಚರ್ಯಪಡುತ್ತ ಹೊರಟು ಹೋದರು. ದೇವದೂತರು ಅಜಾಮಿಳನಿಗೆ ಅಭಯ ಮುದ್ರೆಯನ್ನು ತೋರಿಸಿ ಮಾಯವಾದರು.

ಆಗಿನಿಂದ ಅಜಾಮಿಳನ ಜೀವಿತದಲ್ಲಿ ದೊಡ್ಡ ಮಾರ್ಪಾಡು ಬಂತು. ತನ್ನ ಮಗನನ್ನು ಒಂದುಸಾರಿ "ನಾರಾಯಣಾ" ಎಂದು ಕರೆದ ಮಾತ್ರಕ್ಕೇ ವಿಷ್ಣುದೂತರು ಬರುವುದನ್ನು ನೋಡಿ, ಪರಮಾತ್ಮನ ಅಪಾರ ಪ್ರೇಮವನ್ನು ನೆನೆದು ಪರಮಾನಂದಪಟ್ಟನು. ರೋಗದಿಂದ ಗುಣಮುಖಿನಾದ ಮೇಲೆ, ಅಜಾಮಿಳನು ತನ್ನ ಶೇಷ ಜೀವಿತವನ್ನು ದೈವಭಕ್ತಿ ಸದಾಚಾರಗಳಿಂದ ಕಳೆದು, ಗಂಗಾತೀರದಲ್ಲಿ ಭೌತಿಕ ಕಾಯವನ್ನು ಬಿಟ್ಟು ವಿಷ್ಣು ಲೋಕವನ್ನು ಸೇರಿದನು.



# ಕಂಚುಕೋಟೆ



೧೦

[ಕತ್ತಲೆ ಬಿದ್ದ ಮೇಲೆ ಮರದ ಕೊಂಬೆಯಲ್ಲಿ ನಿದ್ರಿಸಿಕೊಂಡಿದ್ದ ಚಂದ್ರವರ್ಮನು, ಗಂಡಭೇರುಂಡ ಪಕ್ಷಿಗಳು ಎಬ್ಬಿಸಿದ ಗಾಳಿಗೆ ಹಾರಿ ಒಂದು ಪಕ್ಷಿಯ ಬೆನ್ನಿನ ಮೇಲೆ ಬಿದ್ದನು. ಆ ರಾತ್ರಿಯಲ್ಲಿ ಅವನು ಗರಿಗಳೆಡೆಯಲ್ಲಿರುವಾಗ, ಒಂದು ಅಗ್ನಿಪಕ್ಷಿ ಅಲ್ಲಿಗೆ ಬಂದು ಗಂಡಭೇರುಂಡ ಪಕ್ಷಿಗಳನ್ನು ಮಾಂತ್ರಿಕ ಕಾಪಾಲಿನಿಯನ್ನು ಹಿಡಿದು ಶಂಖನ ಬಳಿಗೆ ಸಾಗಿಸಬೇಕೆಂದು ಕೇಳಿತು. ಗಂಡಭೇರುಂಡಗಳು ಅದಕ್ಕೆ ಒಪ್ಪಿದುವು.—ಇನ್ನು ಓದಿರಿ]

ಪ್ರಾಣಿ ಪಕ್ಷಿಗಳ ಭಾಷೆಯನ್ನು ಅರ್ಥಮಾಡಿಕೊಳ್ಳ ಬಲ್ಲವನಾದ ಚಂದ್ರವರ್ಮನಿಗೆ ಅಗ್ನಿಪಕ್ಷಿ ಗಂಡಭೇರುಂಡ ಪಕ್ಷಿಗಳೊಂದಿಗೆ ಆಡಿದ ಮಾತುಗಳನ್ನು ಕೇಳಿ ಬಹಳ ಸಂತೋಷವಾಯಿತು. ಕಾಲನಾಗನ ಸಹಾಯದಿಂದ ತಾನು ಅದ್ಭುತವಾದ ವೃಕ್ಷದಿಂದ ಹಣ್ಣು ಕೊಯಿದು ತಿಂದ ಕಾರಣದಿಂದಲೇ ತನಗೆ ಈ ಪಕ್ಷಿಗಳ ಭಾಷೆ ಅರ್ಥವಾಗುತ್ತಿದೆ. ಅದು ಎಷ್ಟು ದೊಡ್ಡ ಸಹಾಯವೆಂದು ಅಳೆದು ಹೇಳಲಿಕ್ಕೇ ಸಾಧ್ಯವಿಲ್ಲ. ಈ ಪಕ್ಷಿಗಳು ಉತ್ತರ ದಿಕ್ಕಿಗೇ ಹೋಗುತ್ತವೆಂದು ಅವನಿಗೆ ಗೊತ್ತಾಯಿತು. ಆದುದರಿಂದ ತಾನು ನೂರು ಯೋಜನ ದೂರವಿರುವ ಶಂಖ ಮಾಂತ್ರಿಕನ ಬಳಿಗೆ ಸೇರಲು ಕಾಲು ನಡಿಗೆಯಿಂದ ನಡೆಯುತ್ತ ಅನೇಕ ಕಷ್ಟಗಳಿಗೆ ಗುರಿಯಾಗದ ಹಾಗೆ, ಈ ಬ್ರಹ್ಮಾಂಡದಂತಹ ಗಂಡಭೇರುಂಡ ಪಕ್ಷಿಯ ಗರಿಗಳೆಡೆಯಲ್ಲಿ ಅಡಗಿಕೊಂಡು, ಆಯಾಸವೇನಿಲ್ಲದೆ ಸುಲಭವಾಗಿ ಅಲ್ಲಿಗೆ ಹೋಗಿ ಸೇರಬಹುದೆಂದು ಅವನಿಗೆ ತೋರಿತು. ತಾನು ನೆಲಕ್ಕೆ ಬಿದ್ದು ಸಾಯದೆ ಹಕ್ಕಿಯ ಮೃದು ಗರಿಗಳ ಮೇಲೆ ಬಿದ್ದುದು ಕೂಡ ತನ್ನ ಇನ್ನೊಂದು ಅದೃಷ್ಟವೆಂದು ಕುಲದೇವತೆಯನ್ನು ಮನಸಾ ವಂದಿಸಿದನು.

ಸ್ವಲ್ಪವೂ ಇದಿರು ನೋಡದಂತೆ ತನಗೆ ದೊರಕಿದ ಈ ಅದೃಷ್ಟವನ್ನು ನೆನೆದುಕೊಂಡು ಚಂದ್ರವರ್ಮನು ಆನಂದದಿಂದ ಉಬ್ಬಿದನು. ಯಾವಾಗ ಬೆಳಗಾಗುವುದೋ, ಯಾವಾಗ ಈ ಗಂಡಭೇರುಂಡ ಪಕ್ಷಿಗಳೊಂದಿಗೆ, ಆಕಾಶಮಾರ್ಗದಲ್ಲಿ ಹಾಯಾಗಿ ಹಾರಿಕೊಂಡು ಹೋಗಿ ಶಂಖ ಮಾಂತ್ರಿಕನಿರುವ ಬೆಟ್ಟವನ್ನು ಕಾಣುವೆನೋ ಎಂದು ಚಂದ್ರವರ್ಮನು ಆತುರದಿಂದ ನಿರೀಕ್ಷಿಸುತ್ತಿದ್ದನು. ಕಾಪಾಲಿನಿಯನ್ನು ಹಿಡಿದುಕೊಳ್ಳಲಿಕ್ಕಾಗಿ ಶಂಖ ಮಾಂತ್ರಿಕನು ಪ್ರಯೋಗಿಸಲಿರುವ ಕಪಟೋಪಾಯವು ತಪ್ಪದೆ ಬಿದ್ದು ಹೋಗುವುದೆಂದು ಅವನು ಭಾವಿಸಿದನು. ಕಾಪಾಲಿನಿ ಹಾಗೆಲ್ಲಾ ಸಿಕ್ಕಿ ಬೀಳುವಷ್ಟು ಸರಳ ಹೆಂಗುಸೇನಲ್ಲ. ಬಹುಶಃ ಅವಳು ತನ್ನನ್ನು ಹಿಡಿಯಲು ಬರುವ ಗಂಡಭೇರುಂಡ ಪಕ್ಷಿಗಳನ್ನು ಕಾಲನಾಗನಿಗೆ ಆಹಾರವಾಗಿ ಹಾಕಿತೀರುತ್ತಾಳೆ.

ಚಂದ್ರವರ್ಮನು ಹೀಗೆಲ್ಲಾ ಆಲೋಚನೆ ಮಾಡಿಕೊಂಡು ಎಚ್ಚರದಲ್ಲಿದ್ದ ಹಾಗೆಯೇ ಬೆಳ್ಳಗೆ ಬೆಳಗಾಯಿತು. ಸೂರ್ಯನ ಪ್ರಾತಃಕಿರಣಗಳು ತಮ್ಮ ಮೇಲೆ ಬಿದ್ದ ಕೂಡಲೇ ಗಂಡಭೇರುಂಡ ಪಕ್ಷಿಗಳು ಕಣ್ಣು ತೆರೆದು ರೆಕ್ಕೆಗಳನ್ನು ಬಿಡಿಸಿ ಅಲುಗಾಡಿಸಿ ಆಕಾಶದಲ್ಲೆದ್ದು ತೇಲಿದುವು. ಬೆನ್ನಿನ ಮೇಲಿನ ಗರಿಗಳೆಡೆಯಲ್ಲಿ ಅಡಗಿಕೊಂಡಿದ್ದ ಚಂದ್ರವರ್ಮನು, ಅವು ಉತ್ತರ ದಿಕ್ಕಿಗೆ ಹೋಗುತ್ತಿರುವುದನ್ನು ತಿಳಿದು ಬಹಳ ತೃಪ್ತನಾದನು. ನೋಡನೋಡುತ್ತಿದ್ದ ಹಾಗೆಯೇ ಕಾಡುಗಳನ್ನೂ, ಮೇಡುಹಳ್ಳಗಳನ್ನೂ, ಗುಡ್ಡ ಬೆಟ್ಟಗಳನ್ನೂ, ನದಿ ಸರೋವರಗಳನ್ನೂ ದಾಟಿ ಗಂಡಭೇರುಂಡ ಪಕ್ಷಿಗಳು ಒಂದಾನೊಂದು ಪರ್ವತವನ್ನು ಸಮೀಪಿಸುತ್ತಿದ್ದುವು. ಅವುಗಳ ಸಂಭಾಷಣೆಗಳಿಂದಾಗಿ ಮುಂದೆ ಕಾಣುವ ಬೆಟ್ಟವು ಶಂಖ ಮಾಂತ್ರಿಕನು ವಾಸಮಾಡುವ ಬೆಟ್ಟವೇ ಎಂದು ಚಂದ್ರವರ್ಮನಿಗೆ ತಿಳಿಯಿತು.

ಹಠಾತ್ತಾಗಿ ಚಂದ್ರವರ್ಮನು ಕುಳಿತಿದ್ದ ಪಕ್ಷಿ ಕೆಳಭಾಗವನ್ನು ನೋಡಿ, ಎರಡನೇ ಪಕ್ಷಿಯೊಂದಿಗೆ, "ಈ ಸರೋವರ ನೋಡಿದಿಯಾ ಗೆಳೆಯಾ?



ಅಗೋ! ಆನೆಯಷ್ಟು ದಪ್ಪದ ಮೊಸಳೆ. ಮೊಸಳೆಯ ಮಾಂಸ ತಿಂದು ಬಹಳ ದಿನಗಳಾಯಿತಷ್ಟೆ?" ಎಂದು ತಟಾಲ್ಲನೆ ಕೆಳ ಮುಖವಾಗಿ ತಿರುಗಿ, ಬಾಣದಂತೆ ನೇರಾಗಿ ಸರೋವರದ ಕಡೆಗೆ ಇಳಿಯಿತು. "ಹೌದೌದು, ಬಿಡಬಾರದು. ತಾ! ತಾ!" ಎಂದು ಎರಡನೇ ಗಂಡಭೇರುಂಡವೂ ಕೂಗಿತು.

ಸ್ವಲ್ಪವೂ ಇದಿರು ನೋಡದಂತೆ ಗಂಡಭೇರುಂಡವು ಒಮ್ಮೆಗೇ ತಲೆಕೆಳಗಾಗಿ ತಿರುಗಿದಾಗ ಚಂದ್ರವರ್ಮನು ತಬ್ಬಿಬ್ಬಾಗಿ ಗರಿಗಳ ಹಿಡಿತದಿಂದ ಕೈಗಳು ಜಾರಿ, ಪಕ್ಕಕ್ಕೆ ಹೊರಳಿ ತಲೆಕೆಳಗಾಗಿ ಶೂನ್ಯಾಕಾಶದಲ್ಲಿ ಬೀಳತೊಡಗಿದನು.

ಹೀಗೆ ಚಂದ್ರವರ್ಮನು ತನ್ನ ಬೆನ್ನಿನಿಂದ ಜಾರಿ ಸರೋವರಕ್ಕೆ ಬೀಳುವ ಸಂಗತಿ ಯಾವುದೂ ಗಂಡಭೇರುಂಡ ಪಕ್ಷಿಗೆ ತಿಳಿಯದು. ಅದು ತನ್ನ ದೃಷ್ಟಿಯನ್ನು ನೀರಿನ ಮೇಲೆ ತೇಲುತ್ತಿದ್ದ ಮೊಸಳೆಯ ಮೇಲೆಯೇ ನೆಟ್ಟುಕೊಂಡಿದ್ದಿತು. ಬೀಳುವಾಗ ಚಂದ್ರವರ್ಮನ ದೃಷ್ಟಿ ಕೂಡಾ ಆ ಮೊಸಳೆಯ ಮೇಲೆ ಬಿತ್ತು. ತನ್ನ ಗತಿ ಅಲ್ಲಿಗೆ ಮುಗಿಯಿತೆಂದು, ತಾನೀಗ ಮೊಸಳೆಗೋ ಗಂಡಭೇರುಂಡಕ್ಕೋ ತುತ್ತಾಗಿ ಹೋಗುವೆನೆನಿಸಿ ಆಪಾದಮಸ್ತಕ ಹೆದರಿದನು.

ಅಷ್ಟರಲ್ಲೇ ಸರೋವರದೊಳಗಿನಿಂದ ಜಲಧಾರೆಯ ಬುಗ್ಗೆಯೊಂದು ಫಕ್ಕನೆ ತಾಳೇ ಮರದಷ್ಟೆತ್ತರಕ್ಕೆ ಎದ್ದುಕೊಂಡಿತು. ದಭಾಲ್ಲೆಂದು ಶಬ್ದವೂ ಆಯಿತು. ನೀರಿಗೆ ಬೀಳಲಿರುವ ಚಂದ್ರವರ್ಮನು ಅದೇನಾಯಿತೆಂದು ನೋಡಲು ಆ ಕಡೆಗೆ ತಲೆ ತಿರುಗಿಸಿದನಷ್ಟೇ, ಆಗಲೇ ನೀರಿಗೆ ಬಿದ್ದನು.

ಈ ಆಕಸ್ಮಿಕಗಳ ನಡುವೆ ಗಂಡಭೇರುಂಡ ಪಕ್ಷಿ ದಿಕ್ಕುಗಳು ಗಡಚಿಕ್ಕುವಂತೆ ಕರ್ಕಶ ಕೇಕಾನಾದವೆಬ್ಬಿಸಿ ಮೇಲಕ್ಕೆ ಹಾರತೊಡಗಿತು. ಆಗ ಅದರ ಕಾಲುಗುರುಗಳ ನಡುವೆ ದೊಡ್ಡದೊಂದು ಮೊಸಳೆ ಸಿಕ್ಕಿಕೊಂಡು ತಟಪಟನೆ ತುಳ್ಳಿಕೊಂಡಿದ್ದಿತು. ಅದನ್ನು ಎತ್ತಿಕೊಂಡ ರಭಸಕ್ಕೇ ಸರೋವರದ ನೀರು ಬುಗ್ಗೆಯಂತೆ ಹಾರಿತ್ತು!






ಚಂದ್ರವರ್ಮನಿಗೆ ಆ ದೃಶ್ಯವು ರೆಪ್ಪೆ ಬಡಿಯುವಷ್ಟು ಹೊತ್ತಿನವರೆಗೆ ಮಾತ್ರ ಕಂಡಿತು. ಮರುಕ್ಷಣದಲ್ಲಿ ಅವನು ಸರೋವರದೊಳಗೆ ಬುಡುಂಗನೆ ಮುಳುಗಿದ್ದೂ ಆಯಿತು. ಸ್ವಲ್ಪ ಹೊತ್ತಿನ ಮೇಲೆ ಅವನು ನೀರಿನ ಅಡಿಯಿಂದ ಮೇಲು ಭಾಗಕ್ಕೆ ತೇಲಿಬಂದು ಸುತ್ತಲೂ ನೋಡಿದನು. ಚಿಕ್ಕವೂ ದೊಡ್ಡವೂ ಆದ ಅನೇಕ ಮೊಸಳೆಗಳು ಚೆಲ್ಲಾಚೆದರಿದಂತೆ ಈಜಿಕೊಂಡು ದೂರದೂರ ಓಡಿಹೋಗುವುದು ಕಂಡಿತು. ನೀರು ಪೂರಾ ಅಲೆಯುಲೆಯಾಗಿ ಬಳಬಳನೆ ಶಬ್ದಿಸುತ್ತಿದ್ದಿತು.

ಕೆಲವೇ ಕ್ಷಣಗಳಲ್ಲಿ ಸಾವಿನ ಭಯವು ಬಂದು ದೂರವಾದುದನ್ನು ತಿಳಿದು ಚಂದ್ರವರ್ಮನು ಇಷ್ಟ ದೈವವನ್ನು ನೆನೆದು ನಿಟ್ಟುಸಿರು ಬಿಟ್ಟನು. ಒಂದು ವಿಧವಾಗಿ ಹೀಗೆ ನಡೆದುದು ತನ್ನ ಒಳಿತಿಗಾಗಿಯೇ ಎಂತಲೂ ಅವನಿಗೆ ಈಗ ತೋರಿತು. ಗಂಡಭೇರುಂಡ ಪಕ್ಷಿಗಳನ್ನು ನೋಡಿದ ಭಯದಲ್ಲೇ ಮೊಸಳೆಗಳೆಲ್ಲಾ ಆ ಪ್ರಾಂತದಿಂದ ಓಡಿಹೋಗುತ್ತಿವೆ. ಹೀಗಾಗದೆ ತಾನು ಮಾತ್ರ ಸರೋವರಕ್ಕೆ ಬಿದ್ದಿರುತ್ತಿದ್ದರೆ ಇಷ್ಟು ಹೊತ್ತಿಗೆ ಮೊಸಳೆಗಳೆಷ್ಟೋ ತನ್ನನ್ನು ಮುತ್ತಿಕೊಂಡು ಕೈಕಾಲುಗಳನ್ನು ಹಿಡಿದೆಳೆದು ಶರೀರವನ್ನು ಛಿನ್ನಾಭಿನ್ನ ಮಾಡಿಬಿಡುತ್ತಿದ್ದುವು. ಈಗ ಆ ಭಯವಿಲ್ಲ. ನಿರ್ದಿಷ್ಟ ಪ್ರಾಂತಕ್ಕೆ ಬಂದುದೂ ಆಗಿದೆ.

ಚಂದ್ರವರ್ಮನು ಪ್ರಾಣಾಪಾಯದಿಂದ ಹೊರಗೆ ಬಿದ್ದೆನೆಂಬ ಧೈರ್ಯದಿಂದ ಸರೋವರದ ತೀರದ ಕಡೆಗೆ ಬೇಗಬೇಗನೆ ಈಜತೊಡಗಿದನು. ತೀರದಲ್ಲಿ ಗುಂಪು ಗುಂಪಾಗಿ ಮರಗಳೂ ಗಿಡಗಳೂ ಬೆಳೆದಿದ್ದುವು. ಅಲ್ಲಲ್ಲಿ ಬಿದಿರು ಹಿಂಡುಗಳೂ ಕಾಣುತ್ತಿದ್ದುವು. ಆದಷ್ಟು ಬೇಗ ತಾನು ಆ ಮರಗಳ ಗುಂಪನ್ನು ಸೇರಿಕೊಳ್ಳದಿದ್ದರೆ, ಶಂಬ ಮಾಂತ್ರಿಕನ ಮಾಯದ ಭೃತ್ಯರ ಕಣ್ಣಿಗೆ ಬಿದ್ದೇನೇನೋ ಎಂದು ತೋರಿ ವೇಗವಾಗಿ ಈಜಿದನು.

ತೀರವು ಇನ್ನೂ ಇಪ್ಪತ್ತು ಮೂವತ್ತು ಗಜಗಳಷ್ಟು ದೂರದಲ್ಲಿರುವಾಗ, ಚಂದ್ರವರ್ಮನ ಸಮೀಪದಲ್ಲಿ ಸರೋವರದ ನೀರು ಅದೇಕೋ ಒಮ್ಮೆಗೇ ಅಲ್ಲಕಲ್ಲೋಲವಾಗುವುದನ್ನು ನೋಡಿ ಗಾಬರಿಯಾದನು.

ಮೃತ್ಯುವಿನ ಬಾಯಿಯಂತೆ ದೊಡ್ಡದಾಗಿ ಬಾಯಿ ತೆರೆದ ಒಂದು ಮೊಸಳೆ, ತನ್ನ ಬಾಲದಿಂದ ನೀರನ್ನು ಚೆಲ್ಲಾಪಿಲ್ಲಿ ಮಾಡುತ್ತ ಅವನ ಕಡೆಗೇ ವೇಗವಾಗಿ ಬರುತ್ತಿದ್ದಿತು.

ಕ್ಷಣಮಾತ್ರ ಚಂದ್ರವರ್ಮನ ಶರೀರವು ಸ್ತಂಭಿಸಿತು. ಮರುಕ್ಷಣದಲ್ಲಿ ಶರೀರದ ಮೇಲೆ ಯಾವುದೋ ಬಂಡೆಗಲ್ಲು ಕಟ್ಟಿಕೊಂಡಂತಾಗಿ ನೀರಿನ ಅಡಿಗೆ ಎಳೆಯಲ್ಪಟ್ಟು ಹೋಗತೊಡಗಿದನು. ಮೊಸಳೆಯನ್ನು ನೋಡಿದ ಭೀತಿಯ ಭಾರವೇ ಹೀಗೆ ತನ್ನನ್ನು ಮುಳುಗಿಸಿತೆಂದು ಆಮೇಲೆ ಅವನಿಗೆ ತಿಳಿಯಿತು.

ಉತ್ತರ ಕ್ಷಣದಲ್ಲಿ ಅವನು ಧೈರ್ಯದಿಂದ ಕಿರಿಚಿ, ಇದ್ದ ಬಲವನ್ನೆಲ್ಲಾ ಒಟ್ಟುಗೂಡಿಸಿ ಕೈಕಾಲುಗಳನ್ನು ಒದರಿ ಜಾಡಿಸಿಕೊಂಡು ಕವಣೆಯಿಂದ ಬೀಸಿ ಒಗೆದ ಕಲ್ಲಿನಂತೆ ಒಮ್ಮೆಗೇ ತೀರದ ಮೇಲೆ ಹೋಗಿಬಿದ್ದನು.

ಅವನನ್ನು ಹಿಡಿದು ಹಪ್ಪಳದಂತೆ ಅಗಿದು ತಿನ್ನಬೇಕೆಂದಿದ್ದ ಮೊಸಳೆ ಆಮೇಲೆ ತೀರಕ್ಕೆ ಬಂದಿತು. ಅಷ್ಟರೊಳಗೇ ಚಂದ್ರವರ್ಮನು ಚೆಂಡಿನಂತೆ ಎದ್ದು ಮರಗಳ ಗುಂಪಿನೊಳಗೆ ಓಡಿಬಿಟ್ಟನು. ಮೊಸಳೆ ಅವನು ಓಡಿದ ಕಡೆಗೇ ಬಾಯಿ ತೆರೆದು ಸ್ವಲ್ಪ ಹೊತ್ತು ನೋಡಿ, ಮತ್ತೇನೂ ಮಾಡಲಾಗದೆ ನಿರಾಶೆಯಿಂದ ತಲೆಯನ್ನು ನೀರಿಗೆ ಮುಳುಗಿಸಿ, ಸರೋವರದ ಮಧ್ಯಕ್ಕೆ ಹೊರಟು ಮುಳುಗಿ ಮಾಯವಾಗಿಹೋಯಿತು.



ಚಂದ್ರವರ್ಮನು ಆಯಾಸದಿಂದ ತೂರಾಡುತ್ತ, ಒಂದು ಮರದ ಬೊಡ್ಡೆಗೆ ಒರಗಿ ಕುಳಿತು ಆಯಾಸ ಪರಿಹಾರ ಮಾಡಿಕೊಳ್ಳತೊಡಗಿದನು. ಆಗ ಅವನಿಗೆ ತನ್ನ ಕತ್ತಿಯ ಸಂಗತಿ ನೆನಪಿಗೆ ಬಂದಿತು. ಗಂಡಭೇರುಂಡ ಪಕ್ಷಿಯ ಬೆನ್ನಿನಿಂದ ಸರೋವರದೊಳಗೆ ಬೀಳುವಾಗ ತಾನು ಕತ್ತಿಯನ್ನು ಕಳೆದುಕೊಂಡೆನೇನೋ ಎಂದು ಹೆದರಿದನು. ಒರೆಯ ಕಡೆಗೆ ನೋಡಿದಾಗ, ಕತ್ತಿ ಒರೆಯಿಂದ ಸ್ವಲ್ಪ ಹೊರಗೆ ಬಂದಿತ್ತು.

ಚಂದ್ರವರ್ಮನು ಕತ್ತಿಯನ್ನು ಹೊರಕ್ಕೆ ತೆಗೆದು ನೋಡಿ ತಡವಿ, ಒರೆಯೊಳಗೆ ಸೇರಿದ ನೀರನ್ನು ಹೊರಗೆ ಚೆಲ್ಲಿ, ತೃಪ್ತಿಯಿಂದ ಕತ್ತಿಯನ್ನು ಮತ್ತೆ ಒರೆಯೊಳಗೆ ಇಟ್ಟುಕೊಂಡನು.

"ಇದುವರೆಗೂ ನಾನು ಅದೃಷ್ಟವಂತನೆಂದೇ ಹೇಳಬೇಕು. ನೂರು ಯೋಜನ ದೂರ ನಡೆಯುವ ಶ್ರಮವಿಲ್ಲದೆ, ಗಮ್ಯಸ್ಥಾನವನ್ನು ಮುಟ್ಟಿ, ದೊಡ್ಡದೊಂದು ಸ್ನಾನವೂ ಆಯಿತು. ಆ ಸಮಯದಲ್ಲಿ ಮೊಸಳೆಯ ಬಾಯಿಗೆ ಸಿಕ್ಕದೆ ಬದುಕಿ ಹೊರಬಿದ್ದೆನು. ಆತ್ಮರಕ್ಷಣೆಗೆ ಉಪಯೋಗವಾಗುವ ಒಂದೇ ಒಂದು ಆಯುಧವಾಗಿರುವ ಕತ್ತಿ ಭದ್ರವಾಗಿರುವುದೊಂದು ದೊಡ್ಡ ಪುಣ್ಯ. ಅದೆಲ್ಲ ಸರಿ, ಇನ್ನು ಮುಂದಿನ ಕರ್ತವ್ಯ ? " ಎಂದುಕೊಳ್ಳುತ್ತಾ ಚಂದ್ರವರ್ಮನು ಎದ್ದು ನಿಂತು ಸ್ವಲ್ಪದೂರ ನಡೆದು, ಗಿಡಗಂಟಿಗಳ ಗುಂಪನ್ನು ಬದಿಗೆ ಸರಿಸಿ ದೃಷ್ಟಿಯನ್ನು ಮುಂದೆ ಹರಿಸಿದನು.

ಅವನ ಮುಂದೆ ಸಮೀಪದಲ್ಲೇ ಎತ್ತರವಾದ ಬೆಟ್ಟವಿದ್ದಿತು. ಬೆಟ್ಟದ ಶಿಖರವು ಮೊನೆಮಾಡಿದಂತೆ ಬುಗರಿಯ ಮೂಗಿನ ಹಾಗೆ ಕಾಣುತ್ತಿತ್ತು. ಆ ಬುಗುರಿಯಾಕಾರವು ಕೆಳಗಡೆ ಸ್ವಲ್ಪಸ್ವಲ್ಪವಾಗಿ ಹರಡಿಕೊಂಡು ಹೋಗುತ್ತ ಸಮತಲವನ್ನು ಮುಟ್ಟಿದಾಗ ತುಂಬಾ ಅಗಲವಾಗಿ ಕಾಣುತ್ತಿತ್ತು. ದೂರದಿಂದ ನೋಡಿದರೆ ಆ ಬೆಟ್ಟ ತಲೆ ಕೆಳಗಾಗಿ ಇರಿಸಿದ ದೊಡ್ಡದೊಂದು ಬುಗರಿಯ



ಹಾಗೆ ಕಾಣುತ್ತಿತ್ತು. ಆದುದರಿಂದ ನೋಡಿದ ಕೂಡಲೇ ಗುರುತಿಸುವಂತಿದೆ.

"ಇದೇ ಮಾಂತ್ರಿಕನಿರುವ ಶಂಖಿನ ಬೆಟ್ಟ. ನಾನೀಗ ಅದರ ಬಂದಿಗೇ ಬಂದಿದ್ದೇನೆ. ಇನ್ನು ನನಗೆ ಬೇಕಾದುದು ಆ ಮಾಂತ್ರಿಕನ ಪೂಜಾಗೃಹದಲ್ಲಿರುವ ಅಪೂರ್ವ ಶಕ್ತಿಯುಳ್ಳ ಶಂಖು. ಆ ಶಂಖವು ಒಂದು ನಾಗರಹಾವಿನ ಕೊರಳಿನಲ್ಲಿ ನೇತಾಡಿಕೊಂಡಿದೆ. ಆ ನಾಗರಹಾವು ಗೋಡೆಯಲ್ಲಿರುವ ಗೂಟದಲ್ಲಿ ನೇತಾಡಿಕೊಂಡಿರುತ್ತದೆ. ನಾನು ಆ ಶಂಖವನ್ನು ಅಪಹರಿಸಿಕೊಂಡು ಹೋಗಿ ಕಾಪಾಲಿನಿಗೆ ಕೊಟ್ಟರೆ ಹೊರಟ ಕಾರ್ಯ ಮುಗಿಯುತ್ತದೆ. ಭೇಷ್! ಇದುವರೆಗೆ ಎಲ್ಲಾ ಸವ್ಯವಾಗಿಯೇ ನಡೆದಿದೆ. ಶಂಖವನ್ನು ಹೇಗೆ ಕೈವಶ ಪಡಿಸಿಕೊಳ್ಳಲಿ? ಬೆಟ್ಟವನ್ನು ಹೇಗೆ ಏರಲಿ?"

ಚಂದ್ರವರ್ಮನು ತನ್ನೊಳಗೇ ಆಲೋಚಿಸಿಕೊಳ್ಳುತ್ತ, ದೊಡ್ಡದೊಂದು ಉಸಿರು ಬಿಟ್ಟನು.

ಕಾಪಾಲಿನಿಗೆ ಮಾತುಕೊಟ್ಟು ಶಂಖು ಮಾಂತ್ರಿಕನಿರುವ ಬೆಟ್ಟದ ಬಳಿಗೆ ಹೊರಡುವಾಗ ಅವನನ್ನು ಪೀಡಿಸಿದ ಸಮಸ್ಯೆ, ನೂರು ಯೋಜನ ದೂರ ಹೇಗೆ ನಡೆಯುವೆನೋ ಎಂಬುದಾಗಿತ್ತು. ಈಗ ತೀರಾ ಆ ಬೆಟ್ಟದ ಪ್ರಾಂತವನ್ನು ಸೇರಿದ ಮೇಲೆ ಶಂಖು ಮಾಂತ್ರಿಕನ ಮಂತ್ರಗೃಹವನ್ನು ಸೇರಿ ಆ ಶಂಖವನ್ನು ಕೈವಶಪಡಿಸಿಕೊಳ್ಳುವುದು ಹೇಗೆಂಬುದು ಜಟಿಲ ಪ್ರಶ್ನೆಯಾಯಿತು. ಯಾವ ದಾರಿಯೂ ಕಾಣಿಸದೆ ಹೋಯಿತು.

ಹೀಗೆ ಹತಬುದ್ಧನಾಗಿ ಚಂದ್ರವರ್ಮನು ಮೇಲೆ ಕೆಳಗೆ ನೋಡಿಕೊಂಡಿದ್ದಾಗ, ಒಮ್ಮೆಲೇ ಹೊರಟ ಒಂದು ಶಬ್ದದಿಂದ ಅದುರಿಬಿದ್ದನು. ಇದ್ದಕ್ಕಿದ್ದ ಹಾಗೆ ಕರ್ಣಪುಟಗಳು ಒಡೆದು ಹೋಗುವಂತೆ ಹೊರಟ ಕೂಗನ್ನು ಕೇಳಿ ಚಂದ್ರವರ್ಮನು ಹಾರಿಬಿದ್ದು, ಸಮಾಳಿಸಿಕೊಳ್ಳುವಷ್ಟರಲ್ಲಿ ಮತ್ತೊಮ್ಮೆ ಅದೇ ಶಬ್ದ ಕೇಳಿಸಿತು.

ಈಸಾರಿ ಚಂದ್ರವರ್ಮನಿಗೆ ಆ ಕೂಗು ಯಾರದೆಂದು ಗುರುತು ಸಿಕ್ಕಿತು. ಸುತ್ತು ಮುತ್ತಲೂ ಇರುವ ಮರಗಿಡಗಳ ಗುಂಪಿನೊಳಗಿನಿಂದಲೇ ಆ ಶಬ್ದ ಹೊರಟಿತ್ತು. ಆ ಕೂಗು ಅಗ್ನಿಪಕ್ಷಿಯದೇ. ಕಳೆದ ರಾತ್ರಿ ಇದೇ ಶಬ್ದವನ್ನು ಅವನು ಕೇಳಿದ್ದನು. ಅಗ್ನಿಪಕ್ಷಿ ಗಂಡಭೇರುಂಡ ಪಕ್ಷಿಗಳೊಂದಿಗೆ ಮಾತಾಡಿ ಹೊರಟುಹೋಗುವಾಗ ಇದೇ ರೀತಿಯ ಶಬ್ದವನ್ನು ಹೊರಡಿಸಿತ್ತು.

ಈಗ ತಾನು ಮಾಂತ್ರಿಕ ಶಂಖಿನ ನಿವಾಸಸ್ಥಾನದಲ್ಲಿರುವುದರಿಂದ, ಅವನ ಸೇವಕರಿಂದಲೋ, ಅಥವಾ ಅವನಿಂದಲೋ ತನಗೆ ಕೇಡು ಬರುವ ಸಂಭವವಿರುವುದೆಂದು ಚಂದ್ರವರ್ಮನಿಗೆ ತೋರಿತು. ಆಗ ಅಗ್ನಿಪಕ್ಷಿಗೆ ಹಗಲಿನಲ್ಲಿ ಕಣ್ಣು ಕಾಣುವುದಿಲ್ಲವೆಂಬ ಸಂಗತಿ ನೆನಪಾಯಿತು, ಆದುದರಿಂದ ತನಗೆ ಅಗ್ನಿಪಕ್ಷಿಯಿಂದ ಅಪಾಯ ಸಂಭವಿಸಲಾರದು. ಆದರೆ

ಶಂಖ ಮಾಂತ್ರಿಕನ ಇತರ ಭೃತ್ಯರು ಎಂತೆಂತಹರೋ, ಎಲ್ಲೆಲ್ಲಿರುವರೋ, ಯಾವ ಯಾವ ರೂಪದಲ್ಲಿರುವರೋ ಯಾರಿಗೆ ಗೊತ್ತು ?

ಚಂದ್ರವರ್ಮನು ಭಯದಿಂದ ಸ್ವಲ್ಪಹೊತ್ತು ಸುಮ್ಮನಿದ್ದು ಕಡೆಗೆ ವೊಂಡು ಧೈರ್ಯವನ್ನು ತಂದುಕೊಂಡನು. ತಾನು ತಕ್ಕಷ್ಟು ಜಾಗರೂಕತೆಯಲ್ಲಿರುವುದರ ಹೊರತು, ಯಾವಾಗಲೋ ಬರಲಿರುವ ಅಪಾಯಗಳನ್ನು ಊಹಿಸಿಕೊಳ್ಳುತ್ತ ದಿಗಿಲುಗೊಳ್ಳುವುದರಲ್ಲಿ ಅರ್ಥವಿಲ್ಲವೆಂದು ತನಗೆ ತಾನೇ ಸಮಾಧಾನ ಹೇಳಿಕೊಂಡನು. ತನ್ನ ಕುಲದೇವತೆಯನ್ನು ನೆನೆಯುತ್ತ, ತಾನು ಅಸಹಾಯ ಶೂರನೆಂದೂ, ವೀರಕ್ಷತ್ರಿಯನೆಂದೂ ನೆನಪುಮಾಡಿಕೊಂಡನು. ಆಗ ಅವನಲ್ಲಿ ಅಪರಿಮಿತವಾದ ಧೈರ್ಯವು ಸೇರಿಕೊಂಡಿತು.

ಚಂದ್ರವರ್ಮನು ಸರೋವರ ತೀರದ ವೃಕ್ಷರಾಶಿಗಳು ತುಂಬಿದ ತೋಟದಲ್ಲಿ ತನಗೆ ಹಿಡಿಸಿದ ಹಣ್ಣುಗಳನ್ನೂ, ದೋರೆಗಾಯಿಗಳನ್ನೂ ಕೊಯಿದು ತಿಂದನು. ಸರೋವರಕ್ಕೆ ಪ್ರವಹಿಸುವ ಒಂದು ಬೆಟ್ಟದೊರೆಯ ಒಳ್ಳೆಯ ತಿಳಿನೀರನ್ನು ಕುಡಿದನು. ಹೊಟ್ಟೆ ತಣ್ಣಗಾದಾಗ ತನಗೆ ಹೆಚ್ಚು ಶಕ್ತಿ ಬಂದಂತೆ ತೋರಿತು. ಆಮೇಲೆ ಅವನು ಎಲೆಗಳಿಂದ ತುಂಬಿದ ಒಂದು ಎತ್ತರವಾದ ಮರದ ಮೇಲೆ ಹತ್ತಿ, ಕೊಂಬೆರೆಂಬೆಗಳ ಮರೆಯಲ್ಲಿ ತೃಪ್ತಿಯಾಗಿ ಒರಗಿ ಯಾವಾಗ ಕತ್ತಲೆಯಾಗುವುದೋ ಎಂದು ನಿರೀಕ್ಷಿಸ ತೊಡಗಿದನು. ಕತ್ತಲೆಯಾದ ಮೇಲೆಯೇ ಶಂಖ ಮಾಂತ್ರಿಕನ ಬೆಟ್ಟವನ್ನೇರುವುದು ಒಳ್ಳೆಯದೆಂದು ಅವನ ನಿರ್ಣಯವಾಗಿತ್ತು.

ಪ್ರಯಾಣದ ಬಳಲಿಕೆಯಿಂದಲೂ, ಮಿತಿಮೀರಿದ ಆಲೋಚನೆಗಳಿಂದಲೂ ಚಂದ್ರವರ್ಮನಿಗೆ ತನಗೆ ಒಳ್ಳೆಯ ನಿದ್ದೆ ಬರುವುದಾಗಿ ತಿಳಿಯಿತು. ಆಗ ತಾನು ಮರದಿಂದ ಬಿದ್ದು ಹೋಗದಂತೆ ಮೂರು ಕೊಂಬೆಗಳ ಮಧ್ಯದಲ್ಲಿ ಬಳ್ಳಿಗಳಿಂದ ತನ್ನ ಶರೀರವನ್ನು ಕೊಂಬೆಗಳಿಗೆ ಬಿಗಿದುಕೊಂಡು ಸೌಕರ್ಯವಾಗಿ ಒರಗಿ ಕುಳಿತನು.



ಸ್ವಲ್ಪ ಹೊತ್ತಿಗೆಲ್ಲಾ ಹಾಗೆಯೇ ನಿದ್ರೆ ಹತ್ತಿತು. ಸೂರ್ಯನು ನಡುನೆತ್ತಿಯ ಮೇಲೆ ಬಂದಾಗ ದಟ್ಟವಾದ ಎಲೆಗಳ ನಡುವಿನಲ್ಲಿದ್ದ ಚಂದ್ರವರ್ಮನ ಮೇಲೆ ಸ್ವಲ್ಪವೂ ಬಿಸಿಲು ಬೀಳಲಿಲ್ಲ. ಆ ಕಾರಣದಿಂದ ಸೂರ್ಯನು ಮುಳುಗಿ ಕತ್ತಲೆ ಮುತ್ತಿಕೊಂಡರೂ ಅವನು ಇನ್ನೂ ಮೈಮರೆತ ನಿದ್ದೆಯಲ್ಲೇ ಮುಳುಗಿದ್ದನು.

ಮಧ್ಯರಾತ್ರಿಯ ಹೊತ್ತಿಗೆ ಚಂದ್ರವರ್ಮನು ಮೆಟ್ಟಿಬಿದ್ದಂತೆ ಎಚ್ಚರಕ್ಕೆ ಬಂದನು. ಕಣ್ಣು ಬಿಡಿಸಿ ಸುತ್ತಲೂ ನೋಡಿದರೆ ತಾನು ಎಲ್ಲಿರುವೆನೆಂದೇ ತಿಳಿಯದಂತೆ ಒಂದೇ ಕಗ್ಗಾನುಗತ್ತಲೆ. ಸಮೀಪದಲ್ಲಿರುವ ಸರೋವರದಿಂದ ಚಿಕ್ಕ ಚೀಕ್ಕ ನೀರಿನ ಶಬ್ದಗಳು ಆಗೊಮ್ಮೆ ಈಗೊಮ್ಮೆ ಕೇಳುತ್ತಿದ್ದುವು. ಗಾಳಿಯ ಬೀಸುವಿಕೆಗೆ ಮರಗಳ ಕೊಂಬೆಗಳು ಒಂದನ್ನೊಂದು ಒರೆಸಿಕೊಂಡು ಕಿರ್ರು ಕಿರ್ರು ಅನ್ನುತ್ತಿದ್ದುವು. ಎಲ್ಲಿಯೂ ನರಸಂಚಾರವಿದ್ದಂತೆ ಕಾಣಲಿಲ್ಲ.

"ಅರರೇ ! ರಾತ್ರಿ ತುಂಬಾ ಹೊತ್ತಾದ ಹಾಗಿದೆ. ಇದೀಗ ಒಳ್ಳೆಯ ಸಮಯ. ಬೆಟ್ಟದ ಮೇಲೆ ಹತ್ತಿ ಶಂಖ ಮಾಂತ್ರಿಕನ ಸಮಾಚಾರ ನೋಡೋಣ" ಎಂದುಕೊಳ್ಳುತ್ತ ಚಂದ್ರವರ್ಮನು ಮರದ ಮೇಲಿನಿಂದ ಕೆಳಗಿಳಿದು, ಒಂದುಸಾರಿ ಮೈ ಮುರಿದುಕೊಂಡು, ಒರೆಯಿಂದ ಕತ್ತಿಯನ್ನು ಸೆಳೆದು ಆಡಿಸಿ, ಒರೆಯಲ್ಲಿಟ್ಟು ಕಾರ್ಯೋನ್ಮುಖನಾಗಿ ಹೊರಟನು.

ಕತ್ತಲೆಯಲ್ಲಿ ಗಿಡಮರ ಪೊದರುಗಳನ್ನು ಜಾಗರೂಕತೆಯಿಂದ ತಪ್ಪಿಸಿಕೊಳ್ಳುತ್ತ ಬೆಟ್ಟದ ಕಡೆಗೆ ಸ್ವಲ್ಪದೂರ ನಡೆದನು. ಅವನ ಕಣ್ಣು ಆ ಗಾಢಾಂಧಕಾರದಲ್ಲಿ ಅಗ್ನಿಪಕ್ಷಿಗಾಗಿ ಹುಡುಕಿಕೊಂಡಿದ್ದಿತು. ತನಗೆ ಮುಂದಾಗಿ ಏನಾದರೂ ಅಪಾಯ ಬರುವುದಾದರೆ ಅದರಿಂದಲೇ ಬಂದೀತೆಂದು ಅನುಮಾನವಾಗಿತ್ತು ಅವನಿಗೆ. ಆ ಅಗ್ನಿಪಕ್ಷಿ ಈ ಭಾಗದಲ್ಲಿ ಇಲ್ಲದೆ ಹೋದರೆ ತಾನು ಸುರಕ್ಷಿತವಾಗಿ ಶಂಖನ ಮಂತ್ರಗೃಹದೊಳಗೆ ಪ್ರವೇಶಿಸಬಲ್ಲೆನೆಂಬ ನಂಬುಗೆ ಅವನಿಗಿದ್ದಿತು.

ಚಂದ್ರವರ್ಮನು ಬೆಟ್ಟದ ಅಡಿಯನ್ನು ಸಮೀಪಿಸಲಿರುವಷ್ಟರಲ್ಲಿ, ಅವನ ಸಮೀಪದಲ್ಲಿರುವ ಒಂದು ಸ್ಥಳದಿಂದ ಚಿಕ್ಕದೊಂದು ನರಳಿಕೆಯ ಶಬ್ದವೂ, ಕೂಡಲೇ "ವರ್ಮಾ !" ಎಂದು ಮೆಲ್ಲಗೆ ಕರೆಯುವ ಶಬ್ದವೂ ಕೇಳಿಬಂದಿತು.

ಚಂದ್ರವರ್ಮನು ಆ ಕಂಠಸ್ವರವು ಯಾರದೆಂದು ಕೂಡಲೇ ಗುರುತಿಸಿದನು. ಗಾಬರಿಬೆರೆತ ಆಶ್ಚರ್ಯದಿಂದ ಅವನು, "ಕಾಪಾಲಿನೀ !" ಎನ್ನುತ್ತ ಆ ಶಬ್ದ ಕೇಳಿದ ಕಡೆಗೆ ವೇಗವಾಗಿ ನಡೆದನು.

— (ಇನ್ನೂ ಇದೆ)





# ವರಪರೀಕ್ಷೆ

ಗೊತ್ತೇ ಇದ್ದಂತೆ ಹಟಗಾರನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಬಂದು ಕೊಂಬೆಯಲ್ಲಿ ನೇತಾಡಿಕೊಂಡಿದ್ದ ಶವವನ್ನು ಮರ ಹತ್ತಿ ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹಾಕಿಕೊಂಡು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಬೇತಾಳ ಪ್ರಭಾವದಿಂದ ಶವದ ಬಾಯಿ ಮಾತಾಡಲು ತೊಡಗಿ, " ಎಲೈ ಮಹಾರಾಜನೇ, ಈ ಅಪರಾತ್ರಿಯ ವೇಳೆಯಲ್ಲಿ ನೀನು ಇಷ್ಟು ದೊಡ್ಡ ಸಾಧನೆಗೆ ಇಳಿದಿರುವುದು ನಿನ್ನ ಸ್ವಾರ್ಥಕ್ಕಾಗಿಯೋ ಅಥವಾ ಪರೋಪಕಾರಾರ್ಥವಾಗಿಯೋ ? ಒಂದು ವೇಳೆ ನೀನು ಸ್ವಾರ್ಥಕ್ಕಾಗಿಯೇ ಇಷ್ಟೆಲ್ಲ ಕಷ್ಟಗಳಿಗೆ ಇಳಿದಿರುವೆಯಾದರೆ, ದಕ್ಕಿದ ಫಲವನ್ನು ನೀನೇ ಅನುಭವಿಸಬೇಕಲ್ಲದೆ, ಕೃತವರ್ಮನ ಹಾಗೆ ಬೇರೆಯವರಿಗೆ ಕೊಟ್ಟು ಬಿಡಬೇಡ. ನೀನು ಶ್ರಮ ತಿಳಿಯದಂತೆ ನಡೆಯಲು ಆ ಕೃತವರ್ಮನ ಕಥೆಯನ್ನು ಹೇಳುತ್ತೇನೆ, ಕೇಳು ". ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ಸ್ವರ್ಣಪುರದ ರಾಜನಾದ ಕೃತವರ್ಮನು ಯುವಕನು. ಪ್ರತಿಯೊಂದಕ್ಕೂ ಉತ್ಸಾಹ ಉಳ್ಳವನು.

ಬೇತಾಳ ಕಥೆಗಳು?...



ಒಂದು ದಿನ ಅವನು ಬೇಟೆಯಾಡಲು ಕಾಡಿಗೆ ಹೋಗಿ ದಾರಿ ತಪ್ಪಿದನು. ಒಂಟಿಯಾಗಿ ಅಲೆಯುವ ಅವನಿಗೆ ವಿಪರೀತ ದಾಹವಾಯಿತು. ಆ ಸಮಯದಲ್ಲಿ ಬೇಡರ ಯುವತಿಯೊಬ್ಬಳು ಅವನ ಕಣ್ಣಿಗೆ ಬಿದ್ದಳು. ಅವಳು ಅತ್ಯಂತ ಸುಂದರಿ. ಅವಳ ಸೌಂದರ್ಯ ವನ್ನು ನೋಡುತ್ತಿದ್ದಂತೆ ಕೃತವರ್ಮನು ತನ್ನ ದಾಹವನ್ನೇ ಮರೆತುಬಿಟ್ಟನು. ಅವನು ಅವಳನ್ನೇ ನೆಟ್ಟು ನೋಡುತ್ತ ನಿಲ್ಲಲು, ಅವಳು ಕೂಡಾ ಅವನನ್ನು ನೋಡುತ್ತಾ ನಿಂತುಬಿಟ್ಟಳು.

ಸ್ವಲ್ಪ ಹೊತ್ತಿನ ಮೇಲೆ ಕೃತವರ್ಮನು ಅರಿವಿಗೆ ಬಂದು, ತನಗೆ ದಾಹವಾಗಿದೆ ಎಂದು ಅವಳಿಗೆ ಕೈಸನ್ನೆ ಮಾಡಿ ತೋರಿಸಿದನು. ಅವಳು ಕೂಡಲೇ ಅಲ್ಲಿಂದ ಓಡಿಹೋಗಿ, ಒಂದು ತಾಮರೆ ಎಲೆಯ ದೊನ್ನೆಯಲ್ಲಿ ನೀರನ್ನು ತಂದಳು. ಜತೆಯಲ್ಲಿ ತನ್ನ ತಂದೆಯನ್ನೂ ಕರೆದುಕೊಂಡು ಬಂದಳು. ಕೃತ ವರ್ಮನು ನೀರು ಕುಡಿದು ದಾಹ ತೀರಿಸಿಕೊಂಡ ಮೇಲೆ ಬೇಡರ ಯುವತಿಯ ತಂದೆ ಅವನನ್ನು ಯಾರು ಏನೆಂದು ಕೇಳಿದನು. ಕೃತವರ್ಮನು ತನ್ನ ಸಮಾಚಾರವನ್ನು ಅವನಿಗೆ ಹೇಳಿ, "ನಾನು ಈ ಹುಡುಗಿಯನ್ನು ಪ್ರೇಮಿಸುತ್ತೇನೆ. ನೀನು ಒಪ್ಪುವು ದಾದರೆ ಇವಳನ್ನು ಮದುವೆ ಮಾಡಿಕೊಂಡು ನನ್ನ ರಾಜ್ಯಕ್ಕೆ ಕರೆದುಕೊಂಡು ಹೋಗುತ್ತೇನೆ. ಇವಳು ದೇಶಕ್ಕೆ ರಾಣಿಯಾಗುತ್ತಾಳೆ" ಎಂದನು.

ಅದನ್ನು ಕೇಳಿ ಬೇಡರವಳ ತಂದೆ, "ನಾನು ಬೇಡರ ರಾಜನು. ನನ್ನ ಮಗಳನ್ನು ಮದುವೆ ಮಾಡಿಕೊಳ್ಳುವವನು ಇಲ್ಲಿಯೇ ಇದ್ದು ಬೇಡರ ರಾಜ್ಯವನ್ನು ಆಳಬೇಕು. ಆಗಬಹುದೆ ?" ಎಂದನು.

ರಾಜಾ ಕೃತವರ್ಮನಿಗೆ ಒಮ್ಮೆಗೇ ನಿರಾಶೆ ಯಾಯಿತು. ಬೇಡರ ಯುವತಿಗಾಗಿ ನಾಗರಿಕ ಪ್ರಪಂಚವನ್ನು ಬಿಟ್ಟು ಆಟವಿಕರ ನಡುವೆ ಜೀವಿ ಸಿರಲು ಅವನಿಂದಾಗದು.

ಏನು ಮಾಡುವುದೆಂದು ಕೃತವರ್ಮನು ಆಲೋಚಿಸಿಕೊಂಡಿರುವಾಗ, ಬೇಡರ ಹುಡುಗಿ ತಂದೆ ಯೊಂದಿಗೆ, "ಅಪ್ಪಾ, ನಾನು ಒಂದುಸಾರಿ ಈ ರಾಜನೊಂದಿಗೆ ಮಾತಾಡುತ್ತೇನೆ. ಅನುಮತಿ ಕೊಡು" ಎಂದಳು.

ತಂದೆ ಅನುಮತಿಸಿದ ಮೇಲೆ ಅವಳು ರಾಜನನ್ನು ಸ್ವಲ್ಪದೂರ ಕರೆದುಕೊಂಡು ಹೋಗಿ, "ನೀವು ಈ ಮದುವೆಗೆ ಒಪ್ಪಿಬಿಡಿರಿ. ಒಂದುಸಾರಿ ಬೇಡರಿಗೆ ರಾಜನಾದ ಮೇಲೆ, ಇಲ್ಲಿ ಮತ್ತೊಬ್ಬನನ್ನು ರಾಜ ನಾಗುವಂತೆ ನಿಯಮಿಸಿ, ನನ್ನನ್ನು ನಿಮ್ಮ ರಾಜ್ಯಕ್ಕೆ ಕರೆದುಕೊಂಡು ಹೋಗಬಹುದು" ಎಂದು ಹೇಳಿದಳು.

ಇದನ್ನು ಕೇಳಿ ಬೇಡರ ಹುಡುಗಿ ಕೂಡಾ ತನ್ನನ್ನು ಪ್ರೇಮಿಸುವಳೆಂದು ರಾಜನಿಗೆ ತಿಳಿಯಿತು. ಅವನು ಅವಳ ತಂದೆಯೊಂದಿಗೆ ತಾನು ಮದುವೆಗೆ ಸಿದ್ಧ ನೆಂದು ಹೇಳಿದನು.



"ಹಾಗಾದರೆ ವರಪರೀಕ್ಷೆಗೆ ಏರ್ಪಾಡು ಮಾಡುತ್ತೇನೆ" ಎಂದನು ಬೇಡರಾಜ.

ಕೃತವರ್ಮನು ಆಶ್ಚರ್ಯದಿಂದ "ವರಪರೀಕ್ಷೆ ಎಂತಹುದು ?" ಎಂದನು.

ಬೇಡ ರಾಜಕುಮಾರಿಯನ್ನು ವರಿಸಲಿರುವ ಯುವಕರ ನಡುವೆ ಮಲ್ಲಯುದ್ಧದ ಸ್ಪರ್ಧೆ ನಡೆಯುತ್ತದೆ. ಅವುಗಳಲ್ಲಿ ಎಲ್ಲರನ್ನೂ ಗೆದ್ದವನನ್ನೇ ಬೇಡ ರಾಜಕುಮಾರಿ ಮದುವೆಯಾಗುತ್ತಾಳೆ. ಇದನ್ನು ತಿಳಿದು ಕೃತವರ್ಮನು ಈ ಸ್ಪರ್ಧೆಗೆ ಒಪ್ಪಿದನು.

ಮಗುದಿನವೇ ವರಪರೀಕ್ಷೆಯ ಮಲ್ಲಯುದ್ಧ ಸ್ಪರ್ಧೆ ನಡೆಯಿತು. ಬೇಡ ರಾಜಕುಮಾರಿಯನ್ನು ಮದುವೆಯಾಗಲು ಬಯಸಿ ಬಂದ ಹನ್ನೆರಡು ಮಂದಿ ಬೇಡ ಯುವಕರಿದ್ದರು. ಬೇಡ ರಾಜನು ಅವರನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದನು. ಕೃತವರ್ಮನು ತನ್ನೊಂದಿಗೆ ಸ್ಪರ್ಧಿಸಿದ ಎಲ್ಲರನ್ನೂ ಸೋಲಿಸಿದನು. ಎರಡನೇ ಭಾಗದಲ್ಲಿ ದೀಪು ಎಂಬವನು ಉಳಿದ ಯುವಕರನ್ನೆಲ್ಲಾ ಸೋಲಿಸಿದನು. ಕಡೆಗೆ ದೀಪುವಿಗೂ ಕೃತವರ್ಮನಿಗೂ ಮಾತ್ರ ಸ್ಪರ್ಧೆ ಬಿತ್ತು.

ಮಲ್ಲ ವಿದ್ಯೆಯಲ್ಲಿ ದೀಪುವಿಗೆ ಅನೇಕ ಮರ್ಮಗಳು ಗೊತ್ತಿದ್ದುವು. ಅಂತಲೇ ಅವನು ಕೃತವರ್ಮನನ್ನು ಬಹಳ ಸುಲಭವಾಗಿ ಸೋಲಿಸಿಬಿಟ್ಟನು. ರಾಜನು ಸೋತುಹೋದ ಕೂಡಲೇ ಬೇಡರ ಯುವತಿ ಚಪ್ಪಾಳೆ ತಟ್ಟಿ ದೀಪುವನ್ನು ಅಭಿನಂದಿಸಿದಳು. ಕೃತವರ್ಮನಿಗೆ ಇದು ಬಹಳ ಅವಮಾನವಾಗಿ ತೋರಿತು.

ಆದರೆ ಬೇಡರ ಹುಡುಗಿ ಸ್ವಲ್ಪ ಹೊತ್ತಿನ ಮೇಲೆ ಕೃತವರ್ಮನನ್ನು ಒಂಟಿಯಾಗಿ ನೋಡಲು ಬಂದು, "ನೀವು ಒಂದು ದೇಶಕ್ಕೆ ರಾಜನೆಂದು ಹೇಳುವಿರಿ. ಸೈನ್ಯದೊಂದಿಗೆ ಇಲ್ಲಿಗೆ ಬಂದು ನನ್ನನ್ನು ಎತ್ತಿಕೊಂಡು ಹೋಗಲಾರಿರಾ ?" ಎಂದು ಕೇಳಿದಳು.

"ನೋಡುತ್ತೇನೆ" ಎಂದಷ್ಟೇ ಉತ್ತರ ಹೇಳಿ, ಕೃತವರ್ಮನು ಕೂಡಲೇ ಬೇಡ ಜನರ ಸಹಾಯದಿಂದ ಸರಿಯಾದ ದಾರಿಯನ್ನು ತಿಳಿದು ತನ್ನ ರಾಜ್ಯಕ್ಕೆ ಹೋಗಿ ಸೇರಿಕೊಂಡನು.

ಆಮೇಲೆ ಕೃತವರ್ಮನು ಆಸ್ಥಾನದ ಮಲ್ಲನನ್ನು ಕರೆಯಿಸಿ, "ಒಂದು ಸಂಗತಿ ಹೇಳುತ್ತೇನೆ ಕೇಳು. ನಾನು ಈವರೆಗೂ ಪ್ರತಿ ವಿದ್ಯೆಯಲ್ಲಿಯೂ ಅದ್ವಿತೀಯನೆನಿಸಿಕೊಂಡವನು. ಮಲ್ಲವಿದ್ಯೆ ಒಂದರಲ್ಲಿ ಮಾತ್ರ ಅಶ್ರದ್ಧೆ ತೋರಿಸಿದ್ದೇನೆ. ಈ ವಿದ್ಯೆಯಲ್ಲಿ ನನ್ನಂಥವನು ಬೇರೊಬ್ಬನಿಲ್ಲವೆಂಬ ಹಾಗೆ ನೀನು ನನಗೆ ಶಿಕ್ಷಣ ಕೊಡಬೇಕು" ಎಂದನು.

ಆಸ್ಥಾನ ಮಲ್ಲನು ಹಾಗೆಯೇ ಆಗಲೆಂದನು. ಕೃತವರ್ಮನು ಹಟಹಿಡಿದು ಒಂದು ತಿಂಗಳವರೆಗೆ ಮಲ್ಲವಿದ್ಯೆಯನ್ನು ಆದ್ಯಂತವಾಗಿ ಅಭ್ಯಾಸ ಮಾಡಿದನು. ಅನಂತರ ಅವನು ಗಂಡುಗಲಿಗಳಾದ



ಇನ್ನೂರು ಮಂದಿ ಸೈನಿಕರನ್ನು ಕರೆದುಕೊಂಡು, ಬೇಡರಾಜನ ಬಳಿಗೆ ಹೋಗಿ ಅವನೊಂದಿಗೆ, "ಬೇಕಾದರೆ ನಾನು ಬಲವಂತವಾಗಿ ನಿನ್ನ ಮಗಳನ್ನು ತೆಗೆದುಕೊಂಡು ಹೋಗಬಲ್ಲೆನು. ಆದರೆ ಹಾಗೆ ಮಾಡುವುದಿಲ್ಲ. ಮತ್ತೆ ವರಪರೀಕ್ಷೆಗೆ ಏರ್ಪಾಡು ಮಾಡು" ಎಂದನು.

ಬೇಡರಾಜನು ಕೂಡಲೇ ಸ್ಪರ್ಧೆಗೆ ಏರ್ಪಾಡು ಮಾಡಿದನು. ಈಸಾರಿ ಕೃತವರ್ಮನು ದೀಪುವನ್ನು ಅವಲೀಲೆಯಿಂದ ಸೋಲಿಸಿ ಗೆದ್ದುಬಿಟ್ಟನು.

ದೀಪು ಸೋತು ಹೋದ ಕೂಡಲೇ ಬೇಡ ರಾಜಕುಮಾರಿಯ ಮುಖದಲ್ಲಿ ದಿಗಿಲು ಕಾಣಿಸಿತು. ಕೃತವರ್ಮನು ಅವಳನ್ನು ನೋಡಿ, "ಹೋದಸಾರಿ ನಾನು ಸೋತು ಹೋದಾಗ ನೀನು ಚಪ್ಪಾಳೆ ತಟ್ಟಿ ಸಂತೋಷಪಟ್ಟಿರುವೆ. ಆಗ ನಾನು ನಿನ್ನನ್ನು ನೋಡಿ, ವೀರತ್ವವನ್ನು ಅಭಿನಂದಿಸುವುದು ಸಹಜ ಗುಣವೆಂದುಕೊಂಡೆನು. ಈಗ ದೀಪು ಸೋತು ಹೋದುದಕ್ಕೆ ಇಷ್ಟೊಂದು ದಿಗಿಲು ಬೀಳುವುದರ ಕಾರಣವೇನು ?" ಎಂದು ಕೇಳಿದನು.

ಅದಕ್ಕೆ ಬೇಡರ ಕುಮಾರಿ ದೀನಳಾಗಿ, "ನಾನು ದೀಪುವನ್ನು ಪ್ರೇಮಿಸಿದ್ದೇನೆ. ಮಲ್ಲ ವಿದ್ಯೆಯಲ್ಲಿ ಅವನು ನಿಮ್ಮನ್ನು ಸೋಲಿಸುತ್ತಾನೆಂದು ನನಗೆ ಗೊತ್ತು. ಅವನ ದೊಡ್ಡತನವನ್ನು ಒಂದು ದೇಶದ ರಾಜನು ಕೂಡಾ ತಿಳಿಯಬೇಕೆಂದು ಆಗ ನಿಮ್ಮನ್ನು ವರಪರೀಕ್ಷೆಗೆ ಪ್ರೋತ್ಸಾಹಪಡಿಸಿದೆ. ಆಗ ನಾನು ಅಂದುಕೊಂಡ ಹಾಗೆಯೇ ಎಲ್ಲಾ ನಡೆಯಿತು" ಎಂದಳು.

"ಹಾಗಾದರೆ ನನ್ನನ್ನು ಸೈನ್ಯದೊಂದಿಗೆ ಬಂದು ನಿನ್ನನ್ನು ಎತ್ತಿಕೊಂಡು ಹೋಗಲು ಏಕೆ ಹೇಳಿದಿ ?" ಎಂದು ಕೃತವರ್ಮನು ಆಶ್ಚರ್ಯದಿಂದ ಕೇಳಿದನು.

ಬೇಡ ರಾಜಕುಮಾರಿ ಸ್ವಲ್ಪಹೊತ್ತು ಮೌನವಾಗಿದ್ದು ಆಮೇಲೆ, "ಒಂದು ದೇಶದ ಮಹಾರಾಜನು ನನ್ನನ್ನು ಪ್ರೇಮಿಸಿ, ನನಗಾಗಿ ಸೈನ್ಯದೊಂದಿಗೆ ಬಂದರೆ, ಅದು ನನಗೊಂದು ಹೆಚ್ಚಳಿಕೆಗೆ ಕಾರಣವಾಗುತ್ತದೆ. ರಾಜನು ನನ್ನನ್ನು ತನ್ನ ದೇಶಕ್ಕೆ ರಾಣಿಯಾಗಿ ಮಾಡುತ್ತೇನೆಂದರೆ ಅದು ಇನ್ನೂ ಹೆಮ್ಮೆಗೆ ಕಾರಣವಾಗುತ್ತದೆ. ಆದರೂ ನಾನು ದೀಪುವಿನೊಂದಿಗೆ ಇರುತ್ತೇನೆಂದರೆ, ನನ್ನ ಪ್ರೇಮವು ಎಷ್ಟು ಗಾಢವೆಂದು ದೀಪು ತಿಳಿದುಕೊಳ್ಳುತ್ತಾನೆ. ಈಗ ವರಪರೀಕ್ಷೆಯಲ್ಲಿ ನೀವು ಜಯಿಸಿ ನನ್ನ ಆಶೆಯನ್ನೆಲ್ಲಾ ಮಣ್ಣುಗೂಡಿಸಿಬಿಟ್ಟಿರಿ" ಎಂದಳು.

ಕೃತವರ್ಮನು ಬೇಡರಾಜನ ಬಳಿಗೆ ಹೋಗಿ, "ನೀನು ನಿನ್ನ ಮಗಳ ಮದುವೆಯನ್ನು ದೀಪುವಿನೊಂದಿಗೇ ನಡೆಸಿಬಿಡು. ನಿನಗೆ ಏನು ಕಷ್ಟ ಬಂದರೂ ನಾನು ಬಂದು ಸಹಾಯ ಮಾಡುತ್ತೇನೆ" ಎಂದನು.

"ನೀವು ವರಪರೀಕ್ಷೆಯಲ್ಲಿ ಗೆದ್ದಿದ್ದೀರಿ. ನಮ್ಮ ಸಂಪ್ರದಾಯದ ಪ್ರಕಾರ ನೀವೇ ಅವಳನ್ನು ಮದುವೆಯಾಗಬೇಕು" ಎಂದನು ಬೇಡರಾಜ.

ಕೃತವರ್ಮನು ನಕ್ಕು, "ವರಪರೀಕ್ಷೆ ಎಂದೋ ನಡೆದುಹೋಗಿದೆ. ಆಗ ನಾನು ಸೋತು ಹೋಗಿದ್ದೇನೆ. ಕನ್ಯೆಯರಿಗೆ ವರಪರೀಕ್ಷೆ ಎಂಬುದು ಒಂದುಸಾರಿ ಮಾತ್ರವೇ ನಡೆಯುವಂತಹುದು" ಎಂದು ಹೇಳಿ, ತನ್ನ ಪರಿವಾರದೊಂದಿಗೆ ಹಿಂದಿರುಗಿ ತನ್ನ ರಾಜ್ಯಕ್ಕೆ ಹೋದನು.

ಹೀಗೆ ಬೇತಾಳವು ಕಥೆಯನ್ನು ಮುಗಿಸಿ, "ರಾಜಾ, ಕೃತವರ್ಮನು ವರಪರೀಕ್ಷೆಯಲ್ಲಿ ಗೆದ್ದು ಕೂಡಾ ಬೇಡರ ಹುಡುಗಿಯನ್ನು ಏಕೆ ವಿವಾಹ ಮಾಡಿಕೊಳ್ಳಲಿಲ್ಲ? ಅವನು ದೀಪುವನ್ನು ಸೋಲಿಸಿ ಬೇಡರ ಹುಡುಗಿಯನ್ನು ವಿವಾಹಮಾಡಿಕೊಳ್ಳಲು ತಾನೇ ಬಂದನು? ಬೇಡರಾಜನೂ ಅವಳನ್ನು ಮಾಡಿಕೊಳ್ಳಲು ಹೇಳಿದ್ದಾನೆ. ಆದರೂ ರಾಜನ ಬುದ್ಧಿ ಮಾರ್ಪಡುವುದಕ್ಕೆ ಹಾಗೇನು ಬಂದಿತು? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಮೌನವಾಗಿದ್ದರೆ ನಿನ್ನ ತಲೆಯೊಡೆದು ಹೋಗುತ್ತದೆ, ಜಾಗ್ರತೆ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ವರಪರೀಕ್ಷೆ ಎಂಬುದು ಒಂದೇಸಾರಿ ನಡೆಯುತ್ತದೆಂಬುದು ನಿಜ. ಎರಡನೇ ಸಾರಿ ನಡೆದರೆ ಅದು ನಿಜವಾದ ವರಪರೀಕ್ಷೆಯಾಗದು. ಇದನ್ನು ಕೃತವರ್ಮನು ಬೇಡರಾಜನೊಂದಿಗೆ ಹೇಳಿದ್ದಾನೆ. ರಾಜನಾಗಿರುವವನು ಒಬ್ಬ ಬೇಡರವನ ಕೈಯಲ್ಲಿ ಸೋಲುವುದೆಂದರೆ ಬಹಳ ಅವಮಾನಕರವಾದ ಸಂಗತಿ. ಅದಕ್ಕಾಗಿಯೇ ಕೃತವರ್ಮನು ಮಲ್ಲವಿದ್ಯೆಯನ್ನು ಮತ್ತಷ್ಟು ಚೆನ್ನಾಗಿ ಹಟತೊಟ್ಟು ಅಭ್ಯಾಸಮಾಡಿ ದೀಪುವಿನೊಂದಿಗೆ ಮತ್ತೊಂದು ಸಾರಿ ಸ್ಪರ್ಧಿಸಲು ಬಂದನು. ಹೀಗೆ ಎರಡನೇಸಾರಿ ಅವನು ಬಂದದ್ದು ವರಪರೀಕ್ಷೆಗೆ ಅಲ್ಲ, ಬಲಪರೀಕ್ಷೆಗೆ. ಈ ಸಂಗತಿಯನ್ನು ಕೃತವರ್ಮನು ಮುಂದಾಗಿ ಬೇಡರಾಜನೊಂದಿಗೆ ಏಕೆ ಹೇಳಲಿಲ್ಲವೆಂದರೆ, ಬೇಡ ಯುವಕನು ತಾನು ಪ್ರೇಮಿಸಿದ ಯುವತಿಗಾಗಿ ರಾಜನೊಂದಿಗೆ ಸ್ಪರ್ಧಿಸಲು ನಿಂತನೇ ಹೊರತು ತಾನು ಅವನಿಗಿಂತ ಬಲವಂತನೆಂದು ರುಜುಮಾಡಲಿಕ್ಕೆ ಅಲ್ಲ. ರಾಜನು ಕೇವಲ ಬಲಪ್ರದರ್ಶನಕ್ಕಾಗಿ ಬಂದನೆಂದು ತಿಳಿದರೆ, ಅವನು ವಿಜಯಕ್ಕಾಗಿ ಹಟತೊಟ್ಟು ಹೋರಾಡದೆ ಹೋಗಬಹುದು. ಆದುದರಿಂದ ಕೃತವರ್ಮನು ತನಗೆ ದಕ್ಕಿದ ಫಲವನ್ನು ದೀಪುವಿಗೆ ಬಿಟ್ಟು ಕೊಟ್ಟಂತಾಗಲಿಲ್ಲ. ಅದು ಮೊದಲೇ ಅವನಿಗೆ ದಕ್ಕದ ಫಲವಾಗಿತ್ತು".

ಹೀಗೆ ರಾಜನ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ, ಎಂದಿನಂತೆ ಮರದ ಕೊಂಬೆಯನ್ನು ಸೇರಿ ನೇತಾಡತೊಡಗಿತು.





# ತೆಂಗಿನಕಾಯಿ ಕಳ್ಳ

ಒಂದು ಗ್ರಾಮದಲ್ಲಿ ದೊಡರಾಮಯ್ಯನೆಂಬ ಆಸ್ತಿವಂತನೊಬ್ಬನಿದ್ದನು. ಅವನು ಸಿದ್ದಪ್ಪನೆಂಬವನನ್ನು ನಾಲ್ಕು ರೂಪಾಯಿ ಸಂಬಳಕ್ಕೆ ತೋಟದ ಕೆಲಸಕ್ಕೆ ಹಾಕಿದನು. ಆಗಿನಿಂದ ತೋಟಮಾಲಿ ಸಿದ್ದಪ್ಪನೆಂದೇ ಅವನನ್ನು ಎಲ್ಲರೂ ಕರೆಯುತ್ತಿದ್ದರು. ದೊಡರಾಮಯ್ಯ ಸಿದ್ದಪ್ಪನಿಂದ ತೆಂಗಿನ ಸಸಿಗಳನ್ನೂ ಬಾಳೆಗಳನ್ನೂ ನೆಡಿಸಿದನು. ತರಕಾರಿಗಳನ್ನೂ ಹಾಕಿಸಿದನು.

ಕಾಲಕ್ರಮದಲ್ಲಿ ತೋಟ ಬೆಳೆದು ಸೊಂಪಾಯಿತು. ತನ್ನ ಸಂಬಳವನ್ನು ಸ್ವಲ್ಪ ಹೆಚ್ಚಿಸಬೇಕೆಂದು ಸಿದ್ದಪ್ಪನು ಯಜಮಾನನನ್ನು ಕೇಳಿದನು.

" ಆಗಲೇನಾ ? ಅಷ್ಟು ಅವಸರವೇನು ಬಂತು ? ತೆಂಗಿನ ಮರ ಫಲ ಬಿಡಲಿ. ಆಗ ನೋಡೋಣ " ಎಂದನು ದೊಡರಾಮಯ್ಯ.

ತೆಂಗಿನ ಮರಗಳಲ್ಲಿ ಫಲ ಬಂದವು. ಎಲ್ಲಾ ಮರಗಳಲ್ಲಿಯೂ ಗೊನೆಗಳಾದವು. ತನ್ನ ಸಂಬಳದಲ್ಲಿ ಎರಡು ರೂಪಾಯಿಯಾದರೂ ಹೆಚ್ಚಿಸಲೇಬೇಕೆಂದು ಸಿದ್ದಪ್ಪ ಪಟಹಿಡಿದು ಕೇಳಿದನು. ಯಜಮಾನನು ಕಣ್ಣುರಳಿಸಿ " ಹೌದೇನು ? ಅಷ್ಟು ಜೋರಾಗಿ ಹೋದೆಯಾ ? ಈಗ ನಿನಗೆ ತೋಟದ ಕೆಲಸ ಏನು ಹೆಚ್ಚಾಯಿತು ಅಂತ ಹೆಚ್ಚು ಕೇಳುತ್ತೀ ? ನಿನ್ನ ಸಂಬಳ ಒಂದು ಕಾಸು ಕೂಡಾ ಹೆಚ್ಚು ಮಾಡಲಾರೆ. ಇಷ್ಟವಿದ್ದರೆ ಇರು, ಇಲ್ಲದಿದ್ದರೆ ಕೆಲಸ ಬಿಟ್ಟು ಹೋಗು " ಎಂದನು ಖಂಡಿತವಾಗಿ.

ಸಿದ್ದಪ್ಪನು ಸಿಕ್ಕಿನಲ್ಲಿ ಬಿದ್ದನು. ಅವನು ತೋಟಕ್ಕೆ ಮಾಡಬೇಕಾದ ಕಷ್ಟದ ಕೆಲಸಗಳನ್ನೆಲ್ಲಾ ಈ ಮೊದಲೇ ಮಾಡಿಯಾಗಿತ್ತು. ಇನ್ನು ಮಾಡಬೇಕಾದ ಕಷ್ಟದ ಕೆಲಸವೇನೂ ಇರಲಿಲ್ಲವೆಂಬುದು ನಿಜವೇ. ಅದನ್ನು ತಿಳಿದೇ ಯಜಮಾನನು ಅಷ್ಟು ಧೈರ್ಯದಲ್ಲಿ ಹೇಳುತ್ತಿದ್ದಾನೆ. ಇಷ್ಟು ಕಾಲ ಸೊಂಟ ಮುರಿದು ನ್ಯಾಯವಾಗಿ ಕೆಲಸಮಾಡಿದ ಸಿದ್ದಪ್ಪನಿಗೆ ಈಗ ಕಳ್ಳ ಬುದ್ಧಿ ಬಂತು.

ಅಂದಿನಿಂದ ಅವನು ಪ್ರತಿ ರಾತ್ರಿಯಲ್ಲಿಯೂ ತೋಟದಿಂದ ಎರಡೆರಡು ತೆಂಗಿನಕಾಯಿಗಳನ್ನು ಕದಿಯಲು ಶುರುಮಾಡಿದನು. ಹಾಗೆ ಮೂರು ದಿನಗಳು ಕಳೆಯುವಷ್ಟರಲ್ಲಿ ದೊಡರಾಮಯ್ಯನಿಗೆ ತೆಂಗಿನಕಾಯಿ ಕಾಣದೆಹೋಗುವುದೆಂದು ಸಂದೇಹ ಬಂತು. ನಾಲ್ಕನೇ ದಿನ ನಿಜವೇ ಅನಿಸಿತು. ಕಳ್ಳ

ಯಾರೆಂದು ತಿಳಿಯಲಿಲ್ಲ. ಅವನು ಸಿದ್ದಪ್ಪನನ್ನು ಕೇಳಿ ನೋಡಿದನು. ತೆಂಗಿನಕಾಯಿ ಕಳವಾಗುವುದೋ, ಯಾರು ಕದಿಯುವವರೋ ತನಗೊಂದೂ ತಿಳಿಯದೆಂದು ಸಿದ್ದಪ್ಪನು ಹೇಳಿದನು.

"ಸರಿ, ರಾತ್ರಿಯಲ್ಲಿ ಕಾವಲುಕಾದು ಕಳ್ಳನನ್ನು ಹಿಡಿ" ಎಂದನು ಯಜಮಾನ.

"ಎರಡು ರೂಪಾಯಿ ಸಂಬಳ ಹೆಚ್ಚು ಮಾಡಿರಿ. ನೀವು ಹೇಳಿದ ಹಾಗೆ ರಾತ್ರಿಯಲ್ಲಿ ಕಾವಲಿದ್ದು ಕಳ್ಳನನ್ನು ಹಿಡಿಯುತ್ತೇನೆ" ಎಂದನು ಸಿದ್ದಪ್ಪ.

"ಅದೆಲ್ಲಾ ಸಾಧ್ಯವಿಲ್ಲ. ನಾನೇ ಕಾವಲು ಕಾಯುತ್ತೇನೆ ಬಿಡು" ಎಂದು ದೊಡರಾಮಯ್ಯ ಗ್ರಾಮದೇವತೆಯ ಗುಡಿಗೆ ಹೋಗಿ, ಕೈ ಮುಗಿದು, "ತಾಯೇ! ತೆಂಗಿನಕಾಯಿ ಕಳ್ಳನನ್ನು ಈ ದಿನ ರಾತ್ರಿ ನನ್ನ ಕೈಗೆ ಸಿಗಿಸಿದಿಯೆಂದರೆ ನಿನಗೆ ಒಂದು ಮೇಕೆಯನ್ನು ಬಲಿಕೊಡುತ್ತೇನೆ ಅಮ್ಮಾ!" ಎಂದು ಹೇಳಿ ಅಡ್ಡಬಿದ್ದು ಎದ್ದನು. ಅದೇ ಸಮಯಕ್ಕೆ ಆ ದೇವತೆಗೆ ಪ್ರದಕ್ಷಿಣೆ ನಮಸ್ಕಾರ ಮಾಡಲು ಅಲ್ಲಿಗೆ ಬಂದಿದ್ದ ಸಿದ್ದಪ್ಪನು ಮರೆಯಲ್ಲಿದ್ದು ಆ ಮಾತನ್ನು ಕೇಳಿಕೊಂಡನು.

ಯಜಮಾನನು ಹೋದ ಮೇಲೆ ಸಿದ್ದಪ್ಪನು ಆ ದೇವತೆಗೆ ಅಡ್ಡಬಿದ್ದು, "ತಾಯೇ, ನನ್ನನ್ನು ಯಜಮಾನನ ಕೈಗೆ ಸಿಕ್ಕಿ ಬೀಳದಂತೆ ತಪ್ಪಿಸಿದೆಯಾದರೆ ನಿನಗೊಂದು ಹುಂಜ ಕೊಡುತ್ತೇನೆ ಅಮ್ಮಾ. ಅದಕ್ಕಿಂತ ಹೆಚ್ಚಿನದನ್ನು ಕೊಡುವ ಶಕ್ತಿ ನನಗಿಲ್ಲ" ಎಂದು ಬೇಡಿಕೊಂಡನು.

ಆ ದಿನ ಅರ್ಧರಾತ್ರಿಯ ಹೊತ್ತಿಗೆ ಸಿದ್ದಪ್ಪನು ಯಜಮಾನನ ತೋಟದೊಳಗೆ ಪ್ರವೇಶಿಸಿ, ಬಾವಿಯ ಬದಿಯಲ್ಲಿದ್ದ ಮರದಿಂದ ಒಂದು ತೆಂಗಿನಕಾಯಿಯನ್ನು ಕಿತ್ತು ದೂರಬೀಸಿ ಒಗೆದನು. ಯಜಮಾನನು ತೋಟದೊಳಗೆ ಎಲ್ಲಿಯಾದರೂ ಇರುವನಾದರೆ, ಕಾಯಿ ಬಿದ್ದಲ್ಲಿಗೇ ಬಂದು ಕಳ್ಳನನ್ನು ಹುಡುಕುವನೆಂದು ಹಾಗೆ ಮಾಡಿದನು.

ಆದರೆ ಹೊಂಚಿಕೊಂಡಿದ್ದ ದೊಡರಾಮಯ್ಯ ಯಾವನೋ ಬಾವಿಯ ಬದಿಯ ತೆಂಗಿನ ಮರಕ್ಕೆ



ಹತ್ತುವುದನ್ನು ನೋಡಿ, ಹಗ್ಗಕೋಲು ತೆಗೆದುಕೊಂಡು ಆ ಮರದ ಕೆಳಗೇ ಬಂದು, “ಸಿಕ್ಕಿದೆಯಾ ಕಳ್ಳಾ! ಬಾ ಕೆಳಗೆ! ನನ್ನನ್ನು ಮೋಸಪಡಿಸಲು ಇನ್ನು ಸಾಧ್ಯವಿಲ್ಲ. ನಿನ್ನನ್ನು ಇದೇ ಮರಕ್ಕೆ ಕಟ್ಟಿ ಚರ್ಮ ಸುಲಿಯದಿದ್ದರೆ ನಾನು ದೊಡರಾಮಯ್ಯನೇ ಅಲ್ಲ!” ಎಂದನು ಹಲ್ಲು ಕಡಿಯುತ್ತಾ.

ಸಿದ್ಧಪ್ಪನು ಹೆದರಿ ಗದಗದಿಸುತ್ತ ಮರದ ಮೇಲೆಯೇ ಕದಲದೆ ಇದ್ದುಬಿಟ್ಟನು. ದೊಡರಾಮಯ್ಯ ನೋಡುತಿದ್ದಂತೆ ಆ ಮರದ ಮೇಲಿನಿಂದಲೇ ಯಾರೋ ಭುಳೋಂ ಎಂದು ಬಾವಿಗೆ ದುಮುಕಿದುದು ಕಂಡಿತು.

ಆ ಕ್ಷಣವೇ ದೊಡರಾಮಯ್ಯ, ಹಗ್ಗಕೋಲುಗಳನ್ನು ಬಾವಿದಂಡೆಯ ಮೇಲಿಟ್ಟು “ಬಾವಿಗೆ ಹಾರಿದರೆ ಬಿಟ್ಟು ಬಿಡುವೆನೆಂದುಕೊಂಡೆಯ? ಈ ಸುತ್ತುಮುತ್ತು ಹದಿನಾಲ್ಕು ಗ್ರಾಮಗಳಲ್ಲಿ ನನ್ನಂಥ ಈಜುಗಾರ ಬೇರೊಬ್ಬನಿಲ್ಲ” ಎನ್ನುತ್ತ, ಕಚ್ಚೆಗಟ್ಟಿ ಬಾವಿಯೊಳಗೆ ಹಾರಿ ಕಳ್ಳನಿಗಾಗಿ ತೊಳಸಾಡ ತೊಡಗಿದನು. ಯಾವನದೋ ತಲೆಯೊಂದು ಅವನ ಕೈಗೆ ತಾಗಿತು, ಆದರೆ ಹಿಡಿಯಲು ಸಿಕ್ಕದೆ ಜಾರಿಹೋಯಿತು.

ಸ್ವಲ್ಪ ಹೊತ್ತಿನಲ್ಲಿ ಆ ಬಾವಿಗೆ ಹಾರಿದವನು ದೊಡರಾಮಯ್ಯನ ಮುಖಕ್ಕೊಂದು ಒದೆಕೊಟ್ಟು ತಟಕ್ಕನೆ ಬದಿದಂಡೆಗಳನ್ನು ಏರಿ ಮೇಲೆ ಹಾರಿ ತಪ್ಪಿಸಿಕೊಂಡು ಹೋಗಿಬಿಟ್ಟನು.

ದೊಡರಾಮಯ್ಯ ಸಮಾಳಿಸಿಕೊಂಡು, ಕಳ್ಳನ ಲಾಘವತನಕ್ಕೆ ಬೆರಗಾಗಿ ಬರಿಗೈಯಿಂದ ಮೇಲೆ ಬಂದು ಅತ್ತಿತ್ತ ನೋಡುತ್ತಾ ಕೈ ಕೈ ಹೊಸಕಿಕೊಂಡನು

ಮರುದಿನ ದೊಡರಾಮಯ್ಯ ಗ್ರಾಮದೇವತೆಯ ಗುಡಿಗೆ ಹೋಗಿ, “ಓ ತಾಯೇ! ನನ್ನನ್ನು ಮೋಸಪಡಿಸಿಬಿಟ್ಟೆಯಲ್ಲಾ! ಕಳ್ಳನು ತಪ್ಪಿಸಿಕೊಂಡು ಓಡಿಬಿಟ್ಟ. ಅದಕ್ಕೇ ನಿನಗೆ ಮೇಕೆ ಕೊಡುವುದಿಲ್ಲವೆಂದು ಮಾಡಿದ್ದೇನೆ” ಎಂದನು.

ಆಗ ಅಲ್ಲಿಯ ಪೂಜಾರಿಯ ಮೇಲೆ ದೇವಿ ಆವೇಶಿತಳಾಗಿ “ಎಲೋ ದೊಡರಾಮಯ್ಯಾ! ಕಳ್ಳನನ್ನು ಕೈಗೆ ಸಿಗಿಸುವಂತೆ ಹೇಳಿದಿ. ಸಿಗಿಸಿದೆ. ನಿನ್ನ ತೋಟಮಾಲಿಗೆ ಎರಡು ರೂಪಾಯಿ ಸಂಬಳ ಹೆಚ್ಚಿಸಲು ಮನಸ್ಸಿಲ್ಲದ ಜಿಪುಣ ನೀನು! ನನಗೆ ಮೇಕೆ ಕೊಡುವುದುಂಟೆ? ಆ ಕಷ್ಟಾಳಿಗೆ ಸಂಬಳ ಹೆಚ್ಚಿಸುತ್ತಿದ್ದರೆ ನಿನಗೆ ಈ ಕಷ್ಟವೇ ಬರುತ್ತಿದ್ದಿಲ್ಲ!” ಎಂದಳು.

ಆ ಮಾತು ಕೇಳಿ ದೊಡರಾಮಯ್ಯನಿಗೆ ಜ್ಞಾನೋದಯವಾಯಿತು. ಆ ದಿನದಿಂದಲೇ ಸಿದ್ಧಪ್ಪನಿಗೆ ಸಂಬಳ ಹೆಚ್ಚು ಮಾಡಿದನು. ಆಮೇಲೆ ತೋಟದಲ್ಲಿ ತೆಂಗಿನಕಾಯಿ ಕಳ್ಳತನಗಳಾಗಲೇ ಇಲ್ಲ!






**ಒಂ**ದು ಊರಿನಲ್ಲಿ ಕೇಶವಗುಪ್ತನೆಂಬ ವ್ಯಾಪಾರಿ ಇದ್ದನು. ಅವನು ಯಾವುದೋ ದೀರ್ಘವ್ಯಾಧಿಯಿಂದ ಹಾಸಿಗೆ ಹಿಡಿದ ಕಾಲದಲ್ಲಿ, ಅವನ ಹತ್ತಿರ ಕೆಲಸ ಮಾಡಿದವರು ತಪ್ಪು ಲೆಕ್ಕಗಳನ್ನು ಬರೆದು ಮೋಸಮಾಡಿ ಅವನ ಸೊತ್ತನ್ನೆಲ್ಲಾ ಅಪಹರಿಸಿ ಬಿಟ್ಟರು. ವ್ಯಾಧಿಯ ನಿವಾರಣೆಗಾಗಿ ಅವನು ವೈದ್ಯರಿಗೂ, ಔಷಧಗಳಿಗೂ ಮನೆಯಲ್ಲಿದ್ದ ಬೆಲೆಬಾಳುವ ವಸ್ತುಗಳನ್ನೂ, ಹೆಂಡತಿಯ ನಗಗಳನ್ನೂ ಮಾರಬೇಕಾಗಿ ಬಂತು. ಹೀಗೆ ಅವನ ವ್ಯಾಧಿ ಗುಣವಾಗಿ ಎದ್ದು ಓಡಾಡುವ ಕಾಲಕ್ಕೆ ಮನೆಯ ವಸ್ತುಗಳೂ, ಹಣದ ಥೈಲವೂ ಖಾಲಿಯಾಗಿ ಅವನು ಪರಮ ದರಿದ್ರನಾಗಿ ಹೋಗಿದ್ದನು.

ಇಷ್ಟೊಂದು ದೀನ ಸ್ಥಿತಿಯಲ್ಲಿ ಕೂಡಾ ಕೇಶವಗುಪ್ತನು ಅಧೈರ್ಯಪಡಲಿಲ್ಲ. ಯಾರ ಹತ್ತಿರವಾದರೂ ಒಂದು ನೂರು ವರಹ ಸಾಲ ಪಡೆದು ಮತ್ತೆ ಏನಾದರೂ ಸಣ್ಣ ವ್ಯಾಪಾರ ಮಾಡಬೇಕೆಂದು ನಿಶ್ಚಯಿಸಿಕೊಂಡನು. ಅದಕ್ಕಾಗಿ ಅವನು ಜಗದೀಪನೆಂಬ ತನ್ನ ಚಿಕ್ಕಂದಿನ ಸ್ನೇಹಿತನ ಬಳಿಗೆ ಹೋದನು.

ಜಗದೀಪನು ಕೇಶವಗುಪ್ತನನ್ನು ಮಾಮೂಲಿನ ಮರ್ಯಾದೆಯಿಂದ ಬರಮಾಡಿಕೊಂಡು, ಅವನು ಬಂದ ಕಾರ್ಯವನ್ನು ವಿಚಾರಿಸಿ ತಿಳಿದನು. ಆಮೇಲೆ ಅವನು ಕೇಶವಗುಪ್ತನನ್ನು ನೋಡಿ, " ತೆಂಗಿನ ಮರಕ್ಕೆ ಹತ್ತಿ ಕಾಯಿ ಕೊಯ್ಯುವವನಿಗೂ, ವ್ಯಾಪಾರಿಗೂ ಬಹಳ ಹೋಲಿಕೆಯುಂಟು. ಒಂದು ಸಾರಿ ತೆಂಗಿನ ಮರ ಹತ್ತುವವನು ಮರದಿಂದ ಕೆಳಗೆ ಬಿದ್ದರೆ ಮತ್ತೆ ಮರ ಹತ್ತುವ ಪ್ರಯತ್ನ ಮಾಡಲಾರ. ಬೇರೇನಾದರೂ ವೃತ್ತಿ ನೋಡಿಕೊಳ್ಳುತ್ತಾನೆ. ನಾನು ಹೇಳಿದ್ದು ಅರ್ಥವಾಯಿತಷ್ಟೆ ? " ಎಂದನು.

ಜಗದೀಪನ ಅಭಿಪ್ರಾಯವೇನೆಂಬುದು ಕೇಶವಗುಪ್ತನಿಗೆ ಅರ್ಥವಾಗಿ, ಬಹಳ ಕೋಪ ಬಂದಿತು. ಬಂದ ಕೋಪವನ್ನು ನುಂಗಿಕೊಂಡು, " ಅಪಾಯ ಬಂತೆಂದು ಹೆದರಿ, ಕಲಿತು ಪಳಗಿದ ವೃತ್ತಿಯನ್ನು ಬಿಟ್ಟು, ಕಲಿಯದಿರುವ ಮತ್ತಾವುದಕ್ಕೋ ಪರದಾಡುವವನು ಪರಮ ಭೀರುವೇ ಸರಿ. ಹೋಲಿಕೆಯ ವಿಷಯ ಹೇಳಿದುದರಿಂದ ಹೇಳುತ್ತೇನೆ. ನಾನೇ ತೆಂಗಿನ ಮರ ಹತ್ತುವವನಾಗಿ ಒಂದುಸಾರಿ ಜಾರಿ

ರಾಂಬಾಬು




ಬಿದ್ದರೆ ಆಮೇಲೆ ಮತ್ತಿಷ್ಟು ಜಾಗ್ರತೆಯಿಂದಿರುತ್ತೇನೆಯೇ ಹೊರತು ಆ ವೃತ್ತಿಯನ್ನು ಬಿಟ್ಟು ಬಿಡಲಾರೆ. ವ್ಯಾಪಾರಿಯಾದ ನಾನು ಕೆಲಸದಾಳುಗಳ ವಿಷಯದಲ್ಲಿ ಮೊದಲೇ ತಕ್ಕಷ್ಟು ಶ್ರದ್ಧೆ ವಹಿಸುತ್ತೇನೆ" ಎಂದನು.

ಈ ಮಾತು ಜಗದೀಪನಿಗೆ ಚುರುಕ್ಕೆನಿಸಿದರೂ, ಇಲ್ಲದ ನಗುವನ್ನು ತೋರಿಸಿಕೊಂಡು, "ಚೆನ್ನಾಗಿ ಹೇಳಿದಿ ಕೇಶವಾ. ಏನಾದರೂ ಈಗ ನನ್ನ ವ್ಯಾಪಾರ ಸ್ಥಿತಿ ಅಷ್ಟೇನೂ ಚೆನ್ನಾಗಿಲ್ಲ. ಒಂದು ಕಡೆ ಸಾಲಗಾರರ ಎಳೆದಾಟ. ಇನ್ನೊಂದು ಕಡೆ ನನ್ನಿಂದ ಸಾಲ ಪಡೆದವರ ಬಳಿಗೆ ತಿರುಗಾಟ. ವಸೂಲಾದರೆ ತಾನೇ! ಅದೊಂದು ಸಂಕಟ. ಈ ಪರಿಸ್ಥಿತಿಯಲ್ಲಿರುವ ನಾನು ನಿನಗೆ ಸಾಲವಾಗಿ ನೂರು ವರಹ ಎಲ್ಲಿಂದ ಕೊಡಲಿ? ಸದ್ಯ ಐದು ವರಹ ತೆಗೆದುಕೋ. ಇದನ್ನು ತಿರುಗಿ ಕೊಡಬೇಕಾಗಿಲ್ಲ ಬಿಡು" ಎಂದನು.

ಇದರಿಂದ ಕೇಶವಗುಪ್ತನಿಗೆ ತನ್ನ ಸ್ನೇಹಿತನ ನಿಜರೂಪ ತಿಳಿಯಿತು. ಅವನು ಜಗದೀಪನು ಕೊಟ್ಟ ಐದು ವರಹಗಳನ್ನು ತೆಗೆದುಕೊಂಡು, ಬೇರೆ ಮೂವರು ಸ್ನೇಹಿತರ ಬಳಿಗೆ ಹೋಗಿ, ತನ್ನ ಸಂಗತಿಯನ್ನು ಹೇಳಿಕೊಂಡನು.

ಆ ಸ್ನೇಹಿತರು ಕೂಡಾ ತಮ್ಮ ಕಷ್ಟಗಳನ್ನು ಹೇಳಿಕೊಂಡು ಐದೈದು ವರಹಗಳನ್ನು ಕೇಶವಗುಪ್ತನಿಗೆ ಕೊಟ್ಟು, ಸ್ನೇಹಿತನಿಗೆ ದೊಡ್ಡ ಉಪಕಾರ ಮಾಡುವವರ ಹಾಗೆ ಹಿಂದಿರುಗಿ ಕೊಡಬೇಕಾಗಿಲ್ಲವೆಂದೂ ಹೇಳಿಬಿಟ್ಟರು.

ಇನ್ನು ತನಗೆ ನೂರು ವರಹಗಳು ಸಾಲ ಸಿಕ್ಕುವುದು ಅಸಂಭವವೆಂದುಕೊಳ್ಳುತ್ತ, ಕೇಶವಗುಪ್ತನು ನಿರಾಶೆಯಿಂದ ಮನೆಗೆ ಹಿಂದಿರುಗಿ ಬಂದು, ಹೆಂಡತಿಯೊಂದಿಗೆ ತನ್ನ ಸ್ನೇಹಿತರ ಪ್ರವರ್ತನೆಯನ್ನು ಕುರಿತು ಹೇಳಿಕೊಂಡನು.

ಹೀಗಾದುದನ್ನು ತಿಳಿದು ಕೇಶವಗುಪ್ತನ ಹೆಂಡತಿ ತುಂಬಾ ಚಿಂತಿಸಿದಳು. ಆಮೇಲೆ ಗಂಡನನ್ನು ನೋಡಿ, "ಅಲ್ಲಾ, ಇಷ್ಟು ದೊಡ್ಡ ಪಟ್ಟಣದಲ್ಲಿ ಈ ನಾಲ್ಕು ಜನರು ಮಾತ್ರವೇ ನಿಮಗೆ ಸ್ನೇಹಿತರೇನು? ನೀವು ಇಲ್ಲಿಯೇ ಹುಟ್ಟಿ ಬೆಳೆದವರು. ಎಷ್ಟೋ ಕಾಲದಿಂದ ವ್ಯಾಪಾರ ಮಾಡಿಕೊಂಡಿದ್ದವರು. ಸ್ನೇಹಿತರಾಗಿ ಇನ್ನಾರೂ ಇಲ್ಲವೇನು?" ಎಂದು ಕೇಳಿದಳು.

ಕೇಶವಗುಪ್ತನು ಸ್ವಲ್ಪಹೊತ್ತು ಆಲೋಚನೆ ಮಾಡಿ, ದೊಡ್ಡದೊಂದು ನಿಟ್ಟುಸಿರುಬಿಟ್ಟು, "ಚಿಕ್ಕಂದಿನ ಸ್ನೇಹಿತರು, ವ್ಯಾಪಾರದಲ್ಲಿಯ ಲೇವಾದೇವಿಯ ಮೂಲಕ ಸ್ನೇಹಿತರಾದವರು, ಸ್ನೇಹಿತರಿಂದಾಗಿ ಸ್ನೇಹಿತರಾದವರು ಹೀಗೆ ಸುಮಾರು ನಲುವತ್ತು ಐವತ್ತು ಮಂದಿಯವರಿಗೆ ಸ್ನೇಹಿತರಿರಬಹುದು. ಅದು ಸರಿ, ಏಕೆ ಕೇಳುವಿ?" ಎಂದನು.

"ಹಾಗಾದರೆ ಅವರೆಲ್ಲರ ಹೆಸರುಗಳನ್ನೂ ಸುಮಾರಾಗಿ ಅವರು ಎಲ್ಲೆಲ್ಲಿ ಇರುವರೆಂಬುದನ್ನೂ ಒಂದು ಕಾಗದದಲ್ಲಿ ಬರೆದುಕೊಡಿರಿ" ಎಂದಳು ಕೇಶವಗುಪ್ತನ ಹೆಂಡತಿ.

"ಅವರಿಂದ ಏನು ಪ್ರಯೋಜನವಿದೆ? ಏನು ಮಾಡಬೇಕೆಂದು ನಿನ್ನ ಆಲೋಚನೆ?" ಎಂದು ಆಶ್ಚರ್ಯದಿಂದ ಕೇಳಿದನು ಕೇಶವಗುಪ್ತ.

"ನಾನೇನೂ ಮಾಡುವುದಿಲ್ಲಪ್ಪ. ಆ ಕೆಲಸವನ್ನೆಲ್ಲಾ ನಮ್ಮ ಹುಡುಗ ಹರಿಗುಪ್ತ ಮಾಡಿಬಿಡುತ್ತಾನೆ. ನೀವು ನೋಡುತ್ತ ಸುಮ್ಮನಿರಿ ಈಗ" ಎಂದಳು ಕೇಶವಗುಪ್ತನ ಹೆಂಡತಿ.

ಕೇಶವಗುಪ್ತನು ತನ್ನ ಸ್ನೇಹಿತರೆಲ್ಲರ ಹೆಸರು ದೆಸೆಗಳನ್ನು ನೆನಪಿಗೆ ತಂದುಕೊಂಡು ಒಂದು ಕಾಗದ ದಲ್ಲಿ ಬರೆದು ಹೆಂಡತಿಯ ಕೈಗೆ ಕೊಟ್ಟನು. ಅವಳು ತನ್ನ ಹದಿನಾಲ್ಕು ವಯಸ್ಸಿನ ಮಗನನ್ನು ಕರೆದು, "ನೋಡಪ್ಪಾ, ನೀನು ಈ ಕಾಗದದಲ್ಲಿ ಬರೆದಿರು ವವರ ಹೆಸರಿನವರನ್ನು ಹುಡುಕಿ ನೋಡಿ, ಅವರ ಹತ್ತಿರ ಅಪ್ಪ ನೂರು ವರಹ ಸಾಲ ಕೇಳುತ್ತಾ ರೆಂದು ಹೇಳು. ಅವರು ಕೊಡುವೆನೆಂದರೆ ಅಪ್ಪನೇ ಬಂದು ತೆಗೆದುಕೊಳ್ಳುತ್ತಾರೆ ಎಂದು ಹೇಳಿ ಹಿಂದಿರುಗಿ ಬಾ" ಎಂದು ಹೇಳಿ ಕಳುಹಿಸಿದಳು. ಆ ಕಾಗದದೊಂದಿಗೆ ಬೆಳಿಗ್ಗೆ ಹೊರಟ ಹರಿಗುಪ್ತನು ಸಾಯಂಕಾಲದ ಹೊತ್ತಿನಲ್ಲಿ ಒಂದು ಚೀಲ ತುಂಬ ವರಹಗಳನ್ನು ತುಂಬಿಸಿಕೊಂಡು ಮನೆಗೆ ಬಂದು ಸೇರಿದನು.

ಕೇಶವಗುಪ್ತನು ಅತ್ಯಾಶ್ಚರ್ಯದಿಂದ ಏನು ನಡೆಯಿತೆಂದು ಹುಡುಗನನ್ನು ಕೇಳಿದನು.

"ಅಪ್ಪಾ, ನಿಮ್ಮ ಸ್ನೇಹಿತರಾದ ಯಾರ ಹತ್ತಿರವೂ ಸಾಲವಾಗಿ ಕೊಡಲು ನೂರು ವರಹ ಇರಲೇ ಇಲ್ಲ. ಆದರೆ ಪ್ರತಿಯೊಬ್ಬರೂ ನಿಮ್ಮ ಕಷ್ಟದ ಪರಿಸ್ಥಿತಿ ಗೊತ್ತಿದ್ದವರೇ. ನಿನ್ನ ತಂದೆ ಬಿದ್ದುಹೋದ ವ್ಯಾಪಾರ ವನ್ನು ಮತ್ತೆ ಪ್ರಾರಂಭಿಸಿ ಅಭಿವೃದ್ಧಿಗೆ ಬರುವ ಹಾಗಾಗಲೆನ್ನುತ್ತ ಐದು, ಹತ್ತು ವರಹಗಳ ಹಾಗೆ ಕೊಟ್ಟರು. ಆ ಹಣ ತಿರುಗಿ ಕೊಡಬೇಕಾಗಿಲ್ಲವೆಂತಲೂ ಹೇಳಿದ್ದಾರೆ" ಎಂದನು ಹುಡುಗ ಹರಿಗುಪ್ತ.

ಕೇಶವಗುಪ್ತನು ತನ್ನ ಹೆಂಡತಿಯ ಬುದ್ಧಿ ಸೂಕ್ಷ್ಮತೆಗೆ ಬಹಳವಾಗಿ ಮೆಚ್ಚಿದನು. ಹರಿಗುಪ್ತನು ತಂದುದನ್ನು ಲೆಕ್ಕಮಾಡಿ ನೋಡಿದಾಗ ನಾನ್ನೂರು ವರಹಗಳಿಗೆ ಮೇಲೆಯೇ ಇದ್ದಿತು. ಸಾಲದ ಭಾರ ವಿಲ್ಲದ ಹಣವದು.

ಆ ಹಣದಿಂದ ಕೇಶವಗುಪ್ತನು ಚಿಕ್ಕ ವ್ಯಾಪಾರ ವನ್ನು ಪ್ರಾರಂಭಿಸಿ, ನ್ಯಾಯವಾದ ಲಾಭವಿಟ್ಟು ಕೊಂಡು, ಐದಾರು ವರ್ಷಗಳಲ್ಲಿ ಮತ್ತೆ ಮೊದಲಿನ ಸ್ಥಿತಿಯನ್ನು ಸೇರಿಕೊಂಡನು.





# ವೈರಾಗ್ಯ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸುತ್ತಿದ್ದ ಕಾಲದಲ್ಲಿ ವಿದೇಹದ ಮುಖ್ಯ ಪಟ್ಟಣ ಮಿಥಿಲಾ ನಗರದಲ್ಲಿ ಮಹಾಜನಕನೆಂಬ ರಾಜನಿದ್ದನು. ಅವನಿಗೆ ಇಬ್ಬರು ಕುಮಾರರು. ಒಬ್ಬನ ಹೆಸರು ಅನಿಷ್ಟಜನಕ ; ಎರಡನೆಯವನು ಪೋಲಜನಕ.

ಕಾಲಕ್ರಮದಲ್ಲಿ ಮಹಾಜನಕನು ತೀರಿಹೋದ ಮೇಲೆ ಹಿರಿಯನಾದ ಅನಿಷ್ಟಜನಕನು ಸಿಂಹಾಸನಕ್ಕೆ ಬಂದನು. ಆಗ ಅವನು ತನ್ನ ತಮ್ಮನಾದ ಪೋಲಜನಕನನ್ನು ಯುವರಾಜನನ್ನಾಗಿ ಮಾಡಿದನು. ಹೀಗೆ ಕಾಲವು ಕಳೆಯುತ್ತಿರಲು, ಅನಿಷ್ಟಜನಕನಿಗೆ ತನ್ನ ತಮ್ಮನು ತನ್ನನ್ನು ಕೊಲೆಮಾಡಿ ತಾನೇ ರಾಜನಾಗಬೇಕೆಂದಿದ್ದಾನೆಂಬ ವಾರ್ತೆ ತಿಳಿಯಿತು. ಆದರೆ ಅನಿಷ್ಟಜನಕನು ಈ ವಾರ್ತೆಯನ್ನು ಲಕ್ಷ್ಯಮಾಡಲಿಲ್ಲ.

ಈ ಬಗೆಯ ಅಣ್ಣನ ಅಲಕ್ಷ್ಯತೆ ತಮ್ಮನಿಗೆ ಬಹಳ ಅನುಕೂಲವೇ ಆಯಿತು. ಪೋಲಜನಕನು ಸ್ವಲ್ಪ ಪರಿವಾರವನ್ನು ತನ್ನ ಜತೆಗೆ ಕೂಡಿಸಿಕೊಂಡು ಅಣ್ಣನ ಮೇಲೆ ತಂತ್ರದ ಜಾಲ ಹರಡಿ, ಯಾವುದೋ ಒಂದು ಜಗಳದ ನೆಪ ತೆಗೆದು ಒಂದು ದಿನ ಅವನ ಮೇಲೆ ತನ್ನ ಕೊಲೆ ಬಂಟರೊಂದಿಗೆ ಬಿದ್ದು, ಅಣ್ಣನನ್ನು ಹತ್ಯಮಾಡಿಬಿಟ್ಟನು.

ಅನಿಷ್ಟಜನಕನು ಸತ್ತುಹೋದ ಸಮಯಕ್ಕೆ ಅವನ ಪಟ್ಟದ ರಾಣಿ ಗರ್ಭಿಣಿಯಾಗಿದ್ದಳು. ತನ್ನ ಗಂಡನು ಸತ್ತುಹೋದನೆಂಬ ವಾರ್ತೆ ಕೇಳಿದ ಕೂಡಲೇ ಅವಳು ತನ್ನ ನಗನಟ್ಟುಗಳನ್ನೂ, ನಾಣ್ಯಗಳನ್ನೂ ಒಂದು ಬುಟ್ಟಿಯಲ್ಲಿ ಹಾಕಿದಳು. ಅವುಗಳ ಮೇಲೆ ಕಸಗಪ್ಪು, ಕಟ್ಟಿಗೆ ಚೂರುಗಳನ್ನು ತುಂಬಿದಳು. ತರುವಾಯ ಅವಳು ಮುಖದ ಮೇಲೆ ಕೊಳೆ ಹಚ್ಚಿಕೊಂಡು, ಮಾಸಿದ ಬಟ್ಟೆಯನ್ನು ಉಟ್ಟು, ತೇಪೆ ಹಾಕಿದ ರವಿಕೆ ತೊಟ್ಟು ಬುಟ್ಟಿಯನ್ನು ತಲೆಯ ಮೇಲೆ ಹೊತ್ತು ಅರಮನೆಯಿಂದ ಹೊರಬಿದ್ದು ನಗರದಿಂದ ಹೊರಗೆ ಹೋದಳು.

ಎಲ್ಲಿಗೆ ಹೋಗಬೇಕೆಂದು ಅವಳಿಗೆ ಗೊತ್ತಿರಲಿಲ್ಲ. ಅದುವರೆಗೂ ಅವಳು ರಾಜಸೌಧವನ್ನು ಬಿಟ್ಟು ಹೊರಗೆ ಬಂದವಳಲ್ಲ. ಕಾಲಚಂಪವೆಂಬ ಒಂದು ನಗರವಿದೆಯೆಂದು ಎಂದೋ ಅವಳೊಮ್ಮೆ ಕೇಳಿದ್ದಳು. ಅಲ್ಲಿರುವವರೆಲ್ಲಾ ಒಳ್ಳೆಯವರಂತೆ. ಸ್ವಲ್ಪ ದೂರ ನಡೆದ ಮೇಲೆ ಅವಳು ಒಂದು ಮರದ



ಕೆಳಗೆ ಬುಟ್ಟಿಯನ್ನಿಟ್ಟು ಕುಳಿತು ದಾರಿಯಲ್ಲಿ ಹೋಗಿ, ಬರುವವರೊಡನೆ "ಕಾಲಚಂಪ ನಗರಕ್ಕೆ ಹೋಗುವ ದಾರಿ ಹೇಗೆ?" ಎಂದು ಕೇಳುತ್ತಿದ್ದಳು. ಒಬ್ಬರಿಂದಲೂ ಹೇಳಲಾಗಲಿಲ್ಲ.

ಕಡೆಗೆ ಒಬ್ಬ ಮುದುಕನು ಗಾಡಿ ಹೊಡೆದು ಕೊಂಡು ಆ ದಾರಿಯಾಗಿ ಬಂದನು. ಅವನು ರಾಣಿಯ ಪ್ರಶ್ನೆಯನ್ನು ಕೇಳಿ, "ನಾನು ಕಾಲಚಂಪ ನಗರಕ್ಕೇ ಹೋಗುತ್ತಿದ್ದೇನೆ. ನೀನು ಗಾಡಿ ಹತ್ತಿ ಕೊಳ್ಳೇನು? ಗರ್ಭಿಣಿ ಬೇರೆ. ಅಷ್ಟುದೂರ ನಡೆಯುವುದು ಕಷ್ಟ. ನಾನು ಕುಲುಕಾಟವಾಗದ ಹಾಗೆ ಗಾಡಿ ಹೊಡೆಯುತ್ತೇನೆ. ಆ ನಗರದ ಹತ್ತಿರ ನಿನ್ನನ್ನು ಇಳಿಸುತ್ತೇನೆ" ಎಂದನು.

ರಾಣಿ ತನ್ನ ಬುಟ್ಟಿಯನ್ನು ಗಾಡಿಯಲ್ಲಿಟ್ಟು, ತಾನೂ ಏರಿಕೊಂಡಳು. ಗಾಡಿಯವನು ಅವಳನ್ನು ಕಾಲಚಂಪ ನಗರದ ಪಕ್ಕದಲ್ಲಿದ್ದ ಗ್ರಾಮ ಚಾವಡಿಯ ಹತ್ತಿರ ಕೆಳಗಿಳಿಸಿ, ತನ್ನ ದಾರಿ ಹಿಡಿದು ಹೋದನು. ಅಲ್ಲಿಂದ ಇನ್ನೆಲ್ಲಿಗೆ ಹೋಗಬೇಕೆಂದು ರಾಣಿಗೆ ಗೊತ್ತಾಗಲಿಲ್ಲ. ಆದುದರಿಂದ ಅವಳು ಗ್ರಾಮ ಚಾವಡಿಯಲ್ಲಿ ಕುಳಿತುಕೊಂಡು ದಾರಿಯಲ್ಲಿ ನಡೆಯುವವರನ್ನು ಸುಮ್ಮನೆ ನೋಡುತ್ತಿದ್ದಳು.

ಸ್ವಲ್ಪ ಹೊತ್ತಿಗೆ ಒಬ್ಬ ಬ್ರಾಹ್ಮಣನು ತನ್ನ ಶಿಷ್ಯರೊಂದಿಗೆ ಸ್ನಾನಕ್ಕೆ ಹೋಗುತ್ತ ಚಾವಡಿಯಲ್ಲಿ ಕುಳಿತಿರುವ ಗರ್ಭಿಣಿಯನ್ನು ನೋಡಿದನು. ಅವಳ ನೋಟವಲ್ಲಿರುವ ಭಾವನೆಗಳಿಂದ ಅವನಿಗೇನೋ ಸಂದೇಹವಾಯಿತು. ಬ್ರಾಹ್ಮಣನು ತನ್ನ ಶಿಷ್ಯರನ್ನು ಹೊರಗೇ ನಿಲ್ಲುವಂತೆ ಹೇಳಿ ಚಾವಡಿಯೊಳಗೆ ಬಂದು "ಯಾರಮ್ಮಾ? ಏನೋ ಕಷ್ಟದಲ್ಲಿರುವ ಹಾಗಿದೆ? ನನ್ನೊಡನೆ ಹೇಳಬಹುದೆ?" ಎಂದು ಮೆಲ್ಲನೆ ಕೇಳಿದನು.

"ಅಯ್ಯಾ, ನಾನು ಮಿಥಿಲಾ ನಗರದ ರಾಣಿ. ನನ್ನ ಗಂಡ ಯುದ್ಧದಲ್ಲಿ ತೀರಿಹೋದುದರಿಂದ ನಾನು ದಿಕ್ಕಿಲ್ಲದ ಅನಾಥಳಾಗಿಬಿಟ್ಟೆನು. ಈ ನಗರದಲ್ಲಿ ನನಗೆ ಯಾರೂ ಪರಿಚಿತರೂ ಇಲ್ಲ" ಎಂದಳು.

"ಈಗ ನಾನು ನಿನ್ನ ಪರಿಚಯದವನಾದೆನೆಂದು ತಿಳಿ, ನೀನು ನನ್ನ ಮನೆಯಲ್ಲಿ ನಿರಪಾಯವಾಗಿರ ಬಹುದು. ಈಗ ಒಂದು ಕೆಲಸಮಾಡು. ಚಿಕ್ಕ ದೊಂದು ನಾಟಕ ಅಷ್ಟೇ. ನೀನು ನನ್ನ ಕಾಲಿಗೆ ಬಿದ್ದು ಹೊರಗಿರುವ ನನ್ನ ಶಿಷ್ಯರ ಕಿವಿಗೆ ಬೀಳುವ ಹಾಗೆ ಘೋರೆಂದು ರೋದಿಸಬೇಕು. ನಿನ್ನ ರಹಸ್ಯವು ಹೊರಗೆ ಬೀಳದಂತೆ ನಿನ್ನನ್ನು ಕಾಪಾಡುತ್ತೇನೆ" ಎಂದನು ಬ್ರಾಹ್ಮಣ.

ರಾಣಿ ಅವನು ಹೇಳಿದ ಹಾಗೆಯೇ ಮಾಡಿದಳು. ಯಾವಳೋ ಒಬ್ಬಳು ತಮ್ಮ ಗುರುಗಳ ಕಾಲಿಗೆ ಬಿದ್ದು ಅಳುವುದನ್ನು ನೋಡಿ, ಶಿಷ್ಯರೆಲ್ಲ ಆತುರ ದಿಂದ ಒಳಗೆ ಬಂದು, "ಏನು? ಏನಾಯಿತು?" ಎಂದು ಪ್ರಶ್ನಿಸಿದರು. ದಾರಿಯಲ್ಲಿ ಹೋಗುವವರೂ ಸೇರಿದರು. ಬ್ರಾಹ್ಮಣನು ಈ ಕೆಳಗಿನಂತೆ ಹೇಳಿದನು:

"ಇವಳು ನನ್ನ ಕಟ್ಟಕಡೆಯ ತಂಗಿ. ನಾನು ನನ್ನ ಸ್ವಂತ ಗ್ರಾಮವನ್ನು ಬಿಟ್ಟು ಬಂದ ಮೇಲೆ ಹುಟ್ಟಿದವಳು. ಇವಳನ್ನು ನೋಡುವ ಸಂದರ್ಭ ನನಗೆ ಬರಲೇ ಇಲ್ಲ. ನಾನು ಊರಿಗೆ ಹೋಗಿದ್ದರೆ ತಾನೇ ? ಈಗ ಇವಳು ಅನಾಥಳಾಗಿ ನನ್ನನ್ನು ಹುಡುಕಿಕೊಂಡು ಬಂದಿದ್ದಾಳೆ."

ಈ ಮಾತಿನ ಮೇಲೆ ಎಲ್ಲರಿಗೂ ವಿಶ್ವಾಸ ಉಂಟಾಯಿತು. ಆಮೇಲೆ ಸುಲಭವಾಗಿ ಬ್ರಾಹ್ಮಣನು ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಉಪಚರಿಸಿದನು. ರಾಣಿ ಅಲ್ಲಿ ಸುಖವಾಗಿರುತ್ತ, ನವಮಾಸ ತುಂಬಿದ ಮೇಲೆ ಒಬ್ಬ ಮಗನನ್ನು ಪ್ರಸವಿಸಿದಳು. ಆ ಮಗನಿಗೆ ಅವಳು ಮಹಾಜನಕನೆಂದು ತನ್ನ ಮಾವಯ್ಯನ ಹೆಸರನ್ನೇ ಇಡಿಸಿದಳು. ಈ ಮಹಾಜನಕನೇ ಬೋಧಿಸತ್ವನು.

ಮಹಾಜನಕನು ಅಲ್ಲಿ ಕ್ರಮವಾಗಿ ಬೆಳೆಯುತ್ತ ದೊಡ್ಡವನಾಗಿ ಬರುತ್ತಿದ್ದನು. ಅವನೊಂದಿಗೆ ಆಡಿಕೊಳ್ಳುವ ಕ್ಷತ್ರಿಯ ಕುಮಾರರೂ ಕೆಲವರಿದ್ದರು. ಅವರು ಅವನನ್ನು ಹೀನವಾಗಿ ಕಾಣುತ್ತಿದ್ದರು. ಅದನ್ನು ನೋಡಿ ಮಹಾಜನಕನು ಕೋಪದಿಂದ ಉರಿಯುತ್ತ ಅವರನ್ನು ಹಿಡಿದು ಚೆನ್ನಾಗಿ ಹೊಡೆಯುವನು. ಅವರು ಅಳುತ್ತಾ ತಮ್ಮವರೊಂದಿಗೆ, ಆ ವಿಧವೇ ಮಗ ತಮ್ಮನ್ನು ಹೊಡೆದನೆಂದು ದೂರು ಹೇಳುವರು.

ತಾನು ವಿಧವೆಯ ಮಗನೆಂಬ ಸಂಗತಿ ಮಹಾಜನಕನಿಗೆ ಗೊತ್ತಾಯಿತು. ತನ್ನ ತಂದೆ ಯಾರೆಂದು ಅವನಿಗೆ ಯೋಚನೆ ಬಂತು. ತಾಯಿಯೊಡನೆ ಕೇಳತೊಡಗಿದನು. ಮೊದಮೊದಲು ತಾಯಿ ಅವನಿಗೆ ನಿಜಸಂಗತಿ ಹೇಳಲಿಲ್ಲ. ಆದರೆ ಮಹಾಜನಕನು ಹಟಹಿಡಿದು ಕೇಳಿದುದರಿಂದ ನಡೆದ ಸಂಗತಿಯನ್ನೆಲ್ಲಾ ಮಗನೊಂದಿಗೆ ಹೇಳಿದಳು.

ತನ್ನ ಚಿಕ್ಕ ತಂದೆ ಅನ್ಯಾಯವಾಗಿ ಜಗಳದ ನೆಪ ತಂದು ತನ್ನ ತಂದೆಯನ್ನು ಕೊಲೆಮಾಡಿ, ವಿದೇಹ ರಾಜ್ಯವನ್ನು ವಶಪಡಿಸಿಕೊಂಡ ಸಂಗತಿ ತಿಳಿದ ಕೂಡಲೇ, ಆ ರಾಜ್ಯವನ್ನು ತಾನು ಮತ್ತೆ



ಸಂಪಾದಿಸಬೇಕೆಂದು ಕುಮಾರ ಮಹಾಜನಕನಿಗೆ ತೋರಿತು. ಹದಿನಾರನೇ ವಯಸ್ಸು ತುಂಬಿದಾಗ ಅವನು ವಿದ್ಯೆಗಳನ್ನೆಲ್ಲ ಕಲಿತು ಮುಗಿಸಿದನು. ಆಮೇಲೆ ಅವನು ತಾಯಿಯೊಂದಿಗೆ, "ಅಮ್ಮಾ, ಚಿಂತಿಸ ಬೇಡ. ನಾನು ವಿದೇಹ ರಾಜ್ಯವನ್ನು ಜಯಿಸಿ ತೀರುತ್ತೇನೆ. ನಿನ್ನ ಹತ್ತಿರ ಧನವೇನಾದರೂ ಇದೆಯೆ ?" ಎಂದು ಕೇಳಿದನು. ಅವಳು ಬುಟ್ಟಿಯಲ್ಲಿ ಅಡಗಿಸಿಟ್ಟುಕೊಂಡು ಬಂದ ಧನಕನಕ ಗಳನ್ನು ಅವನಿಗೆ ತೋರಿಸಿದಳು. ಮಹಾಜನಕನು ಅವುಗಳಿಂದ ಅರ್ಧಭಾಗವನ್ನಷ್ಟೇ ತೆಗೆದುಕೊಂಡು ಮಿಥಿಲಾ ನಗರಕ್ಕೆ ಪ್ರಯಾಣ ಹೊರಟನು.

ಸರಿಯಾಗಿ ಅದೇದಿನ ಹೇಳಿಟ್ಟ ಹಾಗೆ ಮಿಥಿಲಾ ನಗರದಲ್ಲಿ ಪೋಲಜನಕ ಮಹಾರಾಜನಿಗೆ ಒಂದು ಕೈಯೂ, ಒಂದು ಕಾಲೂ ಬಿದ್ದುಹೋದುವು. ಅವನು ಹಾಸಿಗೆ ಹಿಡಿದನು. ಕುಮಾರ ಮಹಾಜನಕನು ಮಿಥಿಲಾನಗರಕ್ಕೆ ಕಾಲಿಟ್ಟ ದಿನವೇ ರಾಜಭವನದಲ್ಲಿ ಪೋಲಜನಕನು ಸತ್ತು ಹೋಗಿಬಿಟ್ಟನು.

ಅವನಿಗೆ ಮಕ್ಕಳಿರಲಿಲ್ಲ. ಬೇರೆ ವಾರಸರೂ ಕಾಣಲಿಲ್ಲ. ರಾಜಪುರೋಹಿತನು ಒಂದು ರಥವನ್ನು ಸಿದ್ಧಪಡಿಸಿ, ಅದರ ಮೇಲೆ ರಾಜನ ಕಿರೀಟವನ್ನಿಟ್ಟು ರಾಜಛತ್ರ, ರಾಜದಂಡ, ರಾಜಪಾದುಕೆಗಳನ್ನೂ ಅದರೊಂದಿಗಿಟ್ಟನು. ಆಮೇಲೆ ಆನೆಯಿಂದ ಆ ರಥವನ್ನು ದೂಡಿಸಿ, ರಥವು ಯಥೇಚ್ಛೆಯಾಗಿ ಹೋಗುವಂತೆ ಮಾಡಿದನು. ಪುರೋಹಿತನೂ ಮಂತ್ರಿ ಮೊದಲಾದವರೂ ರಥದ ಹಿಂದೆಯೇ ಹೊರಟರು.

ರಥವು ಸ್ವಲ್ಪದೂರ ಸಾಗಿ ಉದ್ಯಾನವನದೊಳಗೆ ಮಹಾಜನಕನು ವಿಶ್ರಾಂತಿಗಾಗಿ ಕುಳಿತಿರುವಲ್ಲಿಗೇ ಬಂದು ಗಕ್ಕನೆ ನಿಂತಿತು.

ಮಹಾಜನಕನ ಹತ್ತಿರ . ರಾಜಪುರೋಹಿತನು ಬಂದು ಪರೀಕ್ಷಿಸಿ ನೋಡಿದನು. ಮಹಾಜನಕನ ಶರೀರದಲ್ಲಿರುವ ರಾಜಲಕ್ಷಣದ ರೇಖೆಗಳನ್ನೂ ಮಚ್ಚೆಗಳನ್ನೂ ನೋಡಿ, ಆಶ್ಚರ್ಯಪಡುತ್ತ, ಅನಾಥವಾದ ವಿದೇಹ ರಾಜ್ಯಕ್ಕೆ ಅವನೇ ರಾಜನಾಗಿರಬೇಕೆಂದು ಕೇಳಿಕೊಂಡನು.



ಆಮೇಲೆ ಮಹಾಜನಕನೇ ವಿದೇಹದ ರಾಜನೆಂದು ಪ್ರಕಟಿಸಲ್ಪಟ್ಟಿತು. ಅವನಿಗೆ ಪಟ್ಟಾಭಿಷೇಕವೂ ನಡೆಯಿತು. ಆಗಲೇ ಸೀವಲಿದೇವಿ ಎಂಬವಳೊಂದಿಗೆ ಅವನಿಗೆ ಮದುವೆಯೂ ಆಯಿತು. ಹೀಗೆ ಮಹಾಜನಕನು ಸುಖವಾಗಿ ರಾಜ್ಯಭಾರ ಮಾಡಲು ತೊಡಗಿದನು.

ಅವನಿಗೆ ಒಬ್ಬ ಕುಮಾರನೂ ಹುಟ್ಟಿದನು. ಮಹಾಜನಕನು ಮಗನಿಗೆ " ದೀರ್ಘಾಯು " ಎಂದು ಹೆಸರಿಟ್ಟನು.

ಮುಂದೆ ಒಂದಾನೊಂದು ದಿನ ಮಹಾಜನಕನಿಗೆ ನಗರದಲ್ಲಿರುವ ತೋಟವನ್ನು ನೋಡಬೇಕೆಂದು ಆಶೆಯಾಯಿತು. ಅವನು ತನ್ನ ಆನೆಯ ಮೇಲೇರಿ ತೋಟವನ್ನು ನೋಡಲು ಹೊರಟನು. ತೋಟದೊಳಗೆ ಪ್ರವೇಶಿಸಿದ ಕೂಡಲೇ ಅಂದವಾದ ಎರಡು ಗಿಡ್ಡಗಾದ ಮಾವಿನ ಮರಗಳು ಕಾಣಿಸಿದುವು. ಅವುಗಳು ತುಂಬಿದ ಕೊಂಬೆ ರೆಂಬೆ ಎಲೆಗಳಿಂದ ಗುಮಟಾಕಾರವಾಗಿ ರಂಜಿಸುತ್ತಿದ್ದುವು. ಅವುಗಳಲ್ಲಿ ಒಂದು ಮರದ ತುಂಬಾ ಹಣ್ಣುಗಳಿದ್ದುವು. ಎರಡನೇ ಮರದಲ್ಲಿ ಹಣ್ಣುಗಳೇನೂ ಕಾಣಲಿಲ್ಲ. ಮಹಾಜನಕನು ಹಣ್ಣಿರುವ ಮರದಿಂದ ಒಂದು ಹಣ್ಣನ್ನು ಕೊಯಿದು ತಿಂದು ನೋಡಿದನು. ಬಹಳ ರುಚಿಯಾಗಿದ್ದಿತು. ತಾನು ಮತ್ತೆ ಹಿಂದಿರುಗಿ ಬರುವಾಗ ಇನ್ನೂ ಕೆಲವು ಹಣ್ಣುಗಳನ್ನು ತಿನ್ನಬಹುದೆಂದು ತನ್ನೊಳಗೇ ಅಂದುಕೊಂಡನು ಮಹಾಜನಕ.

ಮಹಾಜನಕನು ಅಲ್ಲಿಂದ ಮುಂದೆ ಸಾಗಿದ ಕೂಡಲೇ, ಅವನ ಪರಿವಾರದವರು ಅತ್ಯಾತುರದಿಂದ ಆ ಮರದ ಹಣ್ಣುಗಳನ್ನೆಲ್ಲಾ ಕೊಯಿದು ತಿಂದುಬಿಟ್ಟರು. ಅವಸರದಲ್ಲಿ ಕೆಲವರು ಆ ಮರದ ಕೊಂಬೆಗಳನ್ನೂ ಮುರಿದರು. ಬಹಳ ಸುಂದರವಾಗಿದ್ದ ಗಿಡ್ಡುಮಾವಿನ ಮರವು ಕ್ಷಣಮಾತ್ರದಲ್ಲಿ ಬೀಭತ್ಸ ರೂಪ ತಾಳಿತು.

ಮಹಾಜನಕ ರಾಜನು ತೋಟವನ್ನು ಸುತ್ತಿ ಹಿಂದಿರುಗಿ ಬರುತ್ತ ಪಾಳು ಬಡೆದುಹೋದ ಮಾವಿನ ಮರವನ್ನು ನೋಡಿ ಬೆರಗಾದನು. ಅದರ ಪಕ್ಕದಲ್ಲಿದ್ದ ಗೊಡ್ಡುಮಾವಿನ ಮರವು ಏನೂ ಆಗದೆ ಎಂದಿನಂತೆ ಕಳಕಳಿಸಿಕೊಂಡು ಕಾಣುತ್ತಿತ್ತು.

" ಇದು ನನಗೊಂದು ಗುಣಪಾಠವನ್ನು ತೋರಿಸುತ್ತಿದೆ. ರಾಜವೈಭವವೆಲ್ಲಾ ಈ ಹಣ್ಣಿನ ಮರದಂತಹುದೇ. ಸನ್ಯಾಸವು ಗೊಡ್ಡು ಮರಕ್ಕೆ ಸಮಾನವಾದುದು. ಅದರ ತಂಟೆಗೆ ಯಾರೂ ಬರುವುದಿಲ್ಲ. ಈ ವೈಭವವನ್ನೆಲ್ಲಾ ಬಿಟ್ಟು ನಾನು ಸನ್ಯಾಸವನ್ನೇ ಸ್ವೀಕರಿಸಬೇಕು. ಅದೇ ಒಳ್ಳೆಯದು " ಎಂದು ತನ್ನೊಳಗೇ ಅಂದುಕೊಂಡನು ಮಹಾಜನಕ.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ.)





## ನಮ್ಮ ನದಿಗಳು :

# ವಿಪಾಶ

ಕಲ್ಮಾಷಪಾದನೆಂಬ ರಾಜನು ಒಂದು ದಿನ ಕುದುರೆಯ ಮೇಲೆ ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದನು. ಒಂದೆಡೆಯಲ್ಲಿ ದಾರಿ ಬಹಳ ಇಕ್ಕಟ್ಟಾಗಿದ್ದಿತು. ಆ ದಾರಿಯಲ್ಲಿ ಶಕ್ತಿ ಎಂಬ ಮುನಿಕುಮಾರನೊಬ್ಬನು ರಾಜನಿಗೆ ಇದಿರಾಗಿ ಬಂದನು. ರಾಜನು ಅವನನ್ನು ಬದಿಯಲ್ಲಿ ನಿಂತು ತನಗೆ ದಾರಿ ಬಿಡಲು ಹೇಳಿದನು.

"ಸಾಧುಗಳ ಸಮಕ್ಷಮದಲ್ಲಿ ವಿನಯ ವಿಧೇಯತೆ ತೋರಿಸಬೇಕಾದುದು ರಾಜರ ಧರ್ಮ. ಅದ್ದರಿಂದ ನೀನೇ ಬದಿಯಲ್ಲಿ ನಿಂತು ನನಗೆ ದಾರಿ ಬಿಡುವುದೇ ನ್ಯಾಯ" ಎಂದನು ಮುನಿಕುಮಾರ. ಆ ಮಾತಿನಿಂದ ಕೋಪಗೊಂಡ ಕಲ್ಮಾಷಪಾದನು ಶಕ್ತಿಯನ್ನು ಕೊರಡೆಯಿಂದ ಹೊಡೆದನು.





ರಾಜನ ಘಾತಕೃತ್ಯವನ್ನು ನೋಡಿ ಅವಾಕ್ಕಾಗಿ ಹೋದ ಮುನಿಕುಮಾರನು, ಬೇಗನೇ ಎಚ್ಚರಕ್ಕೆ ಬಂದು, "ರಾಕ್ಷಸ ಸ್ವಭಾವದ ನೀನು ರಾಜನಾಗಿರಲು ಅರ್ಹನಲ್ಲ. ರಾಕ್ಷಸನಾಗಿ ಹೋಗು !" ಎಂದು ಶಪಿಸಿದನು. ಮರುಕ್ಷಣವೇ ರಾಜನು ರಾಕ್ಷಸನಾಗಿ ಮಾರ್ಪಟ್ಟನು.



ವಸಿಷ್ಠ ಮಹಾಮುನಿಯ ಹಿರಿಯ ಕುಮಾರನೇ ಶಕ್ತಿ. ವಸಿಷ್ಠನ ಮೇಲೆ ವಿಶ್ವಾಮಿತ್ರನಿಗೆ ಬದ್ಧ ವೈರವಿದ್ದಿತು. ಆದುದರಿಂದ ವಿಶ್ವಾಮಿತ್ರನು ರಾಕ್ಷಸನಾದ ಕಲ್ಮಾಷಪಾದನನ್ನು ಮತ್ತೊಂದು ಭೂತವು ಆವಹಿಸುವಂತೆ ಮಾಡಿದನು. ಭೂತವು ಆವಹಿಸಿದ ರಾಕ್ಷಸನಾದ ಕಲ್ಮಾಷಪಾದನು ಒಂದು ದಿನ ಶಕ್ತಿಯನ್ನು ಹಿಡಿದು ಕುತ್ತಿಗೆ ಕಿವಿಚಿ ಕೊಂದು ಬಿಟ್ಟನು.

ಅಲ್ಲಿಗೆ ನಿಲ್ಲದೆ ಕಲ್ಮಾಷಪಾದನು ವಸಿಷ್ಠ ಮುನಿಯ ಆಶ್ರಮಕ್ಕೆ ಹೋದನು. ಆಗ ಅಲ್ಲಿ ವಸಿಷ್ಠನಿರಲಿಲ್ಲ. ರಾಕ್ಷಸನು ನಿರಾಯುಧರಾದ ವಸಿಷ್ಠನ ಕುಮಾರರೆಲ್ಲರನ್ನೂ ಕೊಂದು ಆಶ್ರಮಕ್ಕೆ ಬೆಂಕಿ ಹಚ್ಚಿ ಹೋದನು.





ಆಮೇಲೆ ಆಶ್ರಮಕ್ಕೆ ಹಿಂದಿರುಗಿ ಬಂದ ವಸಿಷ್ಠನು ಸತ್ತು ಬಿದ್ದಿದ್ದ ಕುಮಾರರನ್ನೂ, ಸುಟ್ಟು ಹೋದ ಆಶ್ರಮವನ್ನೂ ನೋಡಿ ದಿಗ್ಭ್ರಾಂತನಾದನು. ಹೇಳಲಾಗದಷ್ಟು ದುಃಖವನ್ನು ಅನುಭವಿಸಿದನು. ಆದರೂ ಎಲ್ಲವೂ ತನ್ನ ವಿಧಿ ಎಂದುಕೊಂಡನೇ ಹೊರತು, ಯಾರ ಮೇಲೂ ಪ್ರತೀಕಾರ ಮಾಡುವ ಯೋಚನೆ ಮೂಡಲಿಲ್ಲ.

ಪುತ್ರಶೋಕವನ್ನು ತಾಳಿಕೊಳ್ಳಲಾಗದೆ ವಸಿಷ್ಠನು ಪ್ರಾಣತ್ಯಾಗ ಮಾಡಿಕೊಳ್ಳಬೇಕೆಂದು ಒಂದು ಬೆಟ್ಟದ ಶಿಖರವನ್ನೇರಿ, ಆಗಲೇ ಆವಿರ್ಭವಿಸಿಕೊಂಡಿದ್ದ ಒಂದು ನದಿಯ ಪ್ರವಾಹಕ್ಕೆ ಧುಮುಕಿದನು.





ವಸಿಷ್ಠನು ನದಿಗೆ ಧುಮುಕಿದರೂ ಪ್ರವಾಹದಲ್ಲಿ ಹೊಡೆದುಕೊಂಡು ಹೋಗಲಿಲ್ಲ. ಅವನ ಸುತ್ತಲೂ ನೀರೇ ಇರಲಿಲ್ಲ. ಮೆತ್ತಗಿನ ಮರಳು ರಾಶಿಯ ಮೇಲೆ ಅವನು ನಿಂತುಕೊಂಡಿದ್ದನು. ನದೀಜನನಿ ತನ್ನನ್ನು ರಕ್ಷಿಸುತ್ತಿದ್ದಾಳೆಂದು ಅವನಿಗೆ ಅರ್ಥವಾಯಿತು.

ಆದರೂ ವಸಿಷ್ಠನು ಸತ್ತು ಹೋಗುವುದನ್ನೇ ನಿರ್ಧರಿಸಿಕೊಂಡು ನದಿಯ ದಂಡೆಗುಂಟ ನಡೆಯುತ್ತಾ, ತುಂಬಾ ಆಳವಾಗಿರುವಲ್ಲಿ ಹೋಗಿ, ಕೈ ಕಾಲು ಕಟ್ಟಿಕೊಂಡು ಮತ್ತೆ ನದಿಯೊಳಗೆ ಧುಮುಕಿದನು.





ನದಿಗೆ ಬಿದ್ದ ಮರುಕ್ಷಣದಲ್ಲೇ ಅವನ ಬಂಧನಗಳೆಲ್ಲಾ ಬಿಟ್ಟು ಹೋದುವು. ಪ್ರವಾಹವು ಅವನನ್ನು ಮೇಲೆ ಎತ್ತಿ, ತುಂತುರುಗಳಿಂದ ಅವನ ಆಯಾಸ ಪರಿಹರಿಸಿ ಉಪಚಾರ ತೋರಿಸಿತು.

ಆಗ ವಸಿಷ್ಠನಿಗೆ ತನ್ನ ಮಗ ಶಕ್ತಿಯ ಹೆಂಡತಿ ನದೀ ತೀರದಲ್ಲಿ ನಿಂತು ದೀನಭಾವದಿಂದ ತನ್ನನ್ನು ನೋಡುವುದು ಕಂಡಿತು. ಅವಳು ತುಂಬಿದ ಗರ್ಭಿಣಿ. ಅವಳು ಬೇಗದಲ್ಲೇ ತನಗೊಬ್ಬ ಮೊಮ್ಮಗನನ್ನು ಹೆತ್ತು ಕೊಡಲಿದ್ದಾಳೆಂದು ವಸಿಷ್ಠನಿಗೆ ನೆನಪಾಯಿತು. ಕಡೇ ಪಕ್ಷ ತನ್ನ ಮೊಮ್ಮಗನಿಗಾಗಿಯಾದರೂ ತಾನು ಬದುಕಿರಬೇಕೆಂಬ ನಿಶ್ಚಯಕ್ಕೆ ಬಂದು ಅವನು ನದಿಯಿಂದ ಮೇಲೆ ಬಂದನು.





ಹೊಸ ನದಿಗೆ ತನ್ನ ಮೇಲಿರುವ ದಯೆಯನ್ನೂ, ತಾಯಿಯಂತಹ ಪ್ರೇಮವನ್ನೂ ನೋಡಿ ವಸಿಷ್ಠನ ಹೃದಯ ಉಕ್ಕಿ ಬಂದಿತು. ಭಕ್ತರಿಗೆ ಪಾಶವಿಮುಕ್ತಿ ಮಾಡುವ ಆ ನದಿಗೆ ವಸಿಷ್ಠನು "ವಿಪಾಶಾ" ಎಂದು ನಾಮಕರಣ ಮಾಡಿದನು. ವಿಪಾಶಾ ನದಿಯಲ್ಲಿ ಸ್ನಾನ ಮಾಡುವುದನು ಭಕ್ತರು ಮಹಾಭಾಗ್ಯವೆಂದು ಭಾವಿಸುತ್ತಾರೆ.



# ರದ್ದುರಾಜನ ಕಥೆ

**ಹಿಂ**ದೆ ಸಿಂಹಪುರಿಯ ದೊಡ್ಡ ರಾಜನು ಥಕ್ಕನೆ ತೀರಿಹೋದುದರಿಂದ, ಹಿರಿಯ ಕುಮಾರ ಯುವಕನಾದ ಕುಮಾರವರ್ಮನು ಪಟ್ಟಾಭಿಷಿಕ್ತನಾಗಿ ಸಿಂಹಾಸನವೇರಿ ರಾಜನಾದನು. ಅವನು ಬಹಳ ಚುರುಕುಬುದ್ಧಿಯವನು. ಯಾವ ವಿಷಯದಲ್ಲಿಯೂ ತಾತ್ಸಾರವೋ, ಆಲಸ್ಯವೋ ತೋರಿಸುವವನಲ್ಲ. ಹಾಗೆ ಯಾರಾದರೂ ಇದ್ದರೆ ಅದನ್ನು ಸಹಿಸುವವನೂ ಅಲ್ಲ.

ಒಂದುದಿನ ಕುಮಾರವರ್ಮನು ರಥದ ಮೇಲೆ ನಗರದ ಬೀದಿಯಲ್ಲಿ ಉದ್ಯಾನವನದ ಕಡೆಗೆ ಹೋಗುತ್ತಿದ್ದನು. ಆಗ ಒಬ್ಬ ತಂದೆ ತನ್ನ ಮಗನನ್ನು ಕೋಪದಿಂದ ಬೈದಾಡುತ್ತ, "ಎಲೋ ಯಾತಕ್ಕೂ ಒದಗದ ಮೂಳಾ ! ನಿನ್ನನ್ನು ವಿದ್ಯಾಭ್ಯಾಸ ಮಾಡಲು ಗುರುಕುಲಕ್ಕೆ ಕಳಿಸಿದ್ದೇ ದೊಡ್ಡ ತಪ್ಪಾಯಿತು. ನೀನು ಬರೀ ಪುಸ್ತಕ ಓದಲಿಕ್ಕೆ ಮಾತ್ರ ಕಲಿತಿರುವೆಯೇ ಹೊರತು ಸ್ವಲ್ಪ ಕೂಡಾ ಲೋಕ ವ್ಯಾವಹಾರವನ್ನು ಕಲೀಲಿಲ್ಲ. ಅಸಲು ಲೋಕಜ್ಞಾನವೇ ನಿನಗಿಲ್ಲ. ಬರೇ ಉದಾಸೀನವೇ ಮೈ ಹಿಡಿದು ಹೋಗಿದೆ. ಅತ್ತ ವ್ಯವಸಾಯದ ಕೆಲಸಕ್ಕೋ, ಇತ್ತ ಬೇರೇನಾದರೂ ಉದ್ಯೋಗಕ್ಕೋ ನೀನು ಪ್ರಯೋಜನವಿಲ್ಲದವನಾಗಿರುವಿ. ಛೀ ಛೀ ! ಗುರುಕುಲದಲ್ಲಿ ಕಲಿತ ವಿದ್ಯೆ ಯಾವುದಕ್ಕೂ ಪ್ರಯೋಜನವಿಲ್ಲವೆಂದು ನಿನ್ನನ್ನು ನೋಡಿದರೇನೇ ಗೊತ್ತಾಗುತ್ತದೆ !"

ತಂದೆ ಅಷ್ಟೊಂದು ಗಟ್ಟಿಯಾಗಿ ಬೈದು ನಿಂದಿಸಿಕೊಂಡಿದ್ದರೂ, ಮಗನು ಅದನ್ನಿಷ್ಟೂ ಹಚ್ಚಿಕೊಳ್ಳದೆ ಜಗಲಿಯಲ್ಲಿ ಕುಳಿತುಕೊಂಡು ಯಾವುದೋ ಪುಸ್ತಕ ಓದುತ್ತಿದ್ದನು.

ಕುಮಾರವರ್ಮ ರಾಜನು ಆ ತಂದೆಯ ಆವೇದನೆಯನ್ನೂ, ಮಗನ ಅಲಕ್ಷ್ಯತೆಯನ್ನೂ ಗಮನಿಸಿದನು. ಮರುಕ್ಷಣದಲ್ಲಿ ಅವನಿಗೆ ಸ್ಫುರಿಸಿದ್ದೇನೆಂದರೆ, ಗುರುಕುಲಗಳು ಇಂತಹ ಮೈಗಳ್ಳರನ್ನೂ, ಬುದ್ಧಿಹೀನರನ್ನೂ ತಯಾರಿಸುವಂತಹವುಗಳು. ಆದುದರಿಂದ ಗುರುಕುಲಗಳನ್ನೇ ರದ್ದುಪಡಿಸಿಬಿಟ್ಟರೆ ಇಂತಹ ನಿರುಪಯೋಗಿಗಳಾದವರು ತಯಾರಾಗುವಂತಹ ಅಪಾಯವು ತಪ್ಪಿ, ಎಲ್ಲರೂ ಚುರುಕಿನವರಾಗುತ್ತಾರೆ. ಮಕ್ಕಳು ತಂದೆ ತಾಯಿಗಳ ಉಪಯೋಗಕ್ಕೆ ಬರುತ್ತಾರೆ. ಕುಮಾರವರ್ಮನು ಹೀಗೆ

ಕೆ. ಜಯಾ



ಆಲೋಚನೆ ಮಾಡಿ, ಮರುದಿನವೇ ಎಲ್ಲಾ ಗುರುಕುಲಗಳನ್ನೂ ರದ್ದುಪಡಿಸಲಾಗಿದೆ ಎಂದು ರಾಜ್ಯದಲ್ಲೆಲ್ಲಾ ಡಂಗುರ ಹೊಡೆಸಿ ಪ್ರಕಟಿಸಿದನು.

ಕೆಲವು ತಿಂಗಳ ಮೇಲೆ ಕುಮಾರವರ್ಮನು ಸಭೆ ನಡೆಸಿಕೊಂಡಿದ್ದಾಗ ಒಬ್ಬ ಮಧ್ಯವಯಸ್ಸಿನವನು, ಆವೇಶದಿಂದ ಓಲಾಡುತ್ತ ಸಭೆಯೊಳಗೆ ಬಂದನು.

ಕುಮಾರವರ್ಮ ರಾಜನು ಏನು ಸಮಾಚಾರವೆಂದು ಕೇಳಲು, ಅವನು ಹೀಗೆಂದನು : "ಮಹಾರಾಜರೇ, ಒಂದು ವಾರದ ಕೆಳಗೆ ನನ್ನ ಮನೆಗೆ ಕಳ್ಳರು ನುಗ್ಗಿ ಇದ್ದ ಬದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಈ ಸಂಗತಿಯನ್ನು ಕೋತ್ವಾಲ ಕಚೇರಿಗೆ ಹೋಗಿ ಬಿನ್ನವಿಸಿಕೊಂಡೆನು. ಅವರು ಕಳ್ಳರನ್ನು ಹಿಡಿಯುವೆವೆಂದೂ ನನ್ನ ವಸ್ತುಗಳು ಮತ್ತೆ ಸಿಗುವ ಹಾಗೆ ಮಾಡುವೆವೆಂದೂ ಮಾತು ಕೊಟ್ಟರು. ಆದರೆ ಈವತ್ತಿನವರೆಗೂ ಕಳ್ಳರನ್ನು ಹಿಡಿಯಲೇ ಇಲ್ಲ. ಇನ್ನು ನನ್ನ ವಸ್ತುಗಳನ್ನು ತಿರುಗಿ ಕೊಡಿಸುವ ಮಾತೆಲ್ಲಿದೆ ? ಪ್ರಜೆಗಳನ್ನು ಕಳ್ಳರಿಂದ ಕಾಪಾಡಲಾಗದ ಈ ರಕ್ಷಕಭಟರು ಏತಕ್ಕೆ ? ಇವರಿಗೆ ತಿಂಗಳು ತಿಂಗಳು ವೇತನ ಕೊಡುವುದು ಏತಕ್ಕೆ ? ಕೋತ್ವಾಲ ಕಚೇರಿ ಏತಕ್ಕೆ ? ಅವರಿಗಾಗಿ ತಾವು ಸಾವಿರಾರು ವರಹಗಳನ್ನು ಖರ್ಚುಮಾಡುವಿರಿ. ಆ ಹಣವೆಲ್ಲಾ ಪ್ರಜೆಗಳಾದ ನಾವು ತೆರಿಗೆ ರೂಪದಲ್ಲಿ ಕೊಟ್ಟದ್ದು ತಾನೇ ? "

ಆ ದಿನ ರಾತ್ರಿ ಕುಮಾರವರ್ಮ ರಾಜನು ರಕ್ಷಕ ಭಟ ಶಾಖೆಗಳನ್ನು ಕುರಿತು ದೀರ್ಘವಾಗಿ ಆಲೋಚನೆ ಮಾಡಿದನು. ಕಳ್ಳರನ್ನು ಹಿಡಿಯಲಾಗದ ರಕ್ಷಕ ಭಟರನ್ನು ಪೋಷಿಸುವುದೆಂದರೆ ಶುದ್ಧ ಬುದ್ಧಿಹೀನತೆಯಾಗಿ ಅವನಿಗೆ ತೋರಿತು. ಆ ಶಾಖೆಗಳನ್ನೇ ರದ್ದುಪಡಿಸಿಬಿಟ್ಟರೆ ಪ್ರಜೆಗಳಿಗೆ ತೆರಿಗೆ ಭಾರವನ್ನು ಆದಷ್ಟು ತಗ್ಗಿಸಬಹುದು.

ರಾಜನು ಮರುದಿನವೇ ಎಲ್ಲಾ ರಕ್ಷಕಭಟರನ್ನೂ ಕೆಲಸದಿಂದ ತೆಗೆದು ಹಾಕಿಸಿ, ಆ ಶಾಖೆಯನ್ನು ಪೂರ್ತಿ ರದ್ದುಪಡಿಸಿದನು. ಈ ಶಾಸನ ರಾಜ್ಯದೊಳಗೆಲ್ಲಾ ಅಮಲಾಯಿತು.

ಈ ರೀತಿಯಾಗಿ ಯಾವ ಸಮಸ್ಯೆ ಎದ್ದರೂ ಆ ಸಮಸ್ಯೆಗೆ ಮೂಲಕಾರಣವಾದುದನ್ನೇ ರದ್ದು ಮಾಡುವುದು ಒಳ್ಳೆಯದೆಂಬ ನಂಬುಗೆ ಕುಮಾರವರ್ಮ ರಾಜನಲ್ಲಿ ನಾಟಿಹೋಯಿತು. ಅದರಿಂದ ಲಾಭವೆಂದೇ ತೋರತೊಡಗಿತು. ಎಂದೋ ಏನೋ, ನಿಜಕ್ಕೂ ಬರುವುದೋ ಬಾರದೆ ಹೋಗುವುದೋ ಎಂಬುದು ಕೂಡಾ ತಿಳಿಯದಂತಹುದು ಯುದ್ಧ ವಿಷಯ. ಅದಕ್ಕಾಗಿ ಯಾವಾಗಲೂ ಸೈನಿಕರನ್ನು ಶೇಖರಿಸುವುದೂ, ಅವರಿಗೆ ಸಂಬಳ ಕೊಡುವುದೂ ವೃಥಾ ಎಂದು ತೋರಿತು ಆ ರಾಜನಿಗೆ. ಅಂತಲೇ ಸೈನಿಕ ಶಾಖೆಯನ್ನೇ ರದ್ದು ಮಾಡಿಬಿಟ್ಟನು. ಹಾಗೆಯೇ ರಾಜಾಸ್ಥಾನದಲ್ಲಿ ಕವಿಗಳೂ, ಪಂಡಿತರೂ, ಕಲಾಕಾರರೂ ಕೇವಲ ಅಲಂಕಾರಪ್ರಾಯರೇ



ಹೊರತು ಮತ್ತೇನಿದೆ? ಅವರಿಗೆ ಕೊಡುವ ಬಹುಮಾನ ಗೌರವ ಮುಂತಾದುವನ್ನೆಲ್ಲಾ ಕುಮಾರ ವರ್ಮ ರಾಜನು ರದ್ದುಪಡಿಸಿದನು.

ಈ ಬಗೆಯ ರದ್ದುಗಳ ಫಲಿತದಿಂದಾಗಿ ಬಹು ಬೇಗದಲ್ಲೇ ರಾಜ್ಯದಲ್ಲಿ ಅರಾಜಕ ಪರಿಸ್ಥಿತಿ ಉಂಟಾಯಿತು. ಆದರೂ ಭಾರವು ಹಗುರಾಯಿತೆಂದುಕೊಂಡ ಕುಮಾರವರ್ಮನು ಅವುಗಳನ್ನು ಕುರಿತು ಆಲೋಚಿಸುವ ಸ್ಥಿತಿಯಲ್ಲಿರಲಿಲ್ಲ.

ಹೀಗಿರುವಾಗ ಮಂತ್ರಿ ಅನಂತಮಿಶ್ರನಿಗೆ ಚಿಂತೆ ಹಿಡಿಯಿತು. ಕಾರಣವೇನೆಂದರೆ ಸಾಮಂತರಾಜನಾದ ಶುಕ್ರಪಾಲನು, ಸ್ವತಂತ್ರಿಸಿ ಸಿಂಹಪುರಿಯ ಮೇಲೆ ಯುದ್ಧಕ್ಕೆ ಬರುವ ಪ್ರಯತ್ನದಲ್ಲಿರುವನೆಂದು ರಹಸ್ಯ ವಾರ್ತೆಯಿಂದ ಅವನಿಗೆ ತಿಳಿಯಿತು.

ಇನ್ನು ಸುಮ್ಮನಿದ್ದರೆ ದೊಡ್ಡ ಅಪಾಯ ಬರುವುದೆಂದು ತಿಳಿದು ಅನಂತಮಿಶ್ರನು ಕುಮಾರ ವರ್ಮ ರಾಜನ ಬಳಿಗೆ ಹೋಗಿ, "ಮಹಾರಾಜಾ, ತಾವು ಇದಿರಾದ ಎಲ್ಲಾ ಸಮಸ್ಯೆಗಳನ್ನೂ ರದ್ದಿನ ಸೂತ್ರದಿಂದ ಬಹಳ ಮಟ್ಟಿಗೆ ಪರಿಷ್ಕರಿಸಿದ್ದೀರಿ. ಅದರಿಂದ ಪ್ರಜೆಗಳ ಪರಿಸ್ಥಿತಿ ಎಷ್ಟು ಸುಖಶಾಂತಿಯಿಂದಿರುವುದೆಂದು ಒಂದುಸಾರಿ ನೋಡಿಬಂದರೆ ಒಳ್ಳೆಯದೆಂದು ನನ್ನ ಅಭಿಪ್ರಾಯ" ಎಂದನು.

ನಿಜವೆಂದನು ರಾಜ. ಆ ದಿನ ಸಾಯಂಕಾಲ ರಾಜನೂ ಮಂತ್ರಿಯೂ ರಾಜಧಾನಿಗೆ ಸಮೀಪದಲ್ಲಿದ್ದ ಒಂದು ಗ್ರಾಮಕ್ಕೆ ಹೋದರು. ಅಲ್ಲಿ ಆಲದ ಮರದ ಬುಡದಲ್ಲಿ ಸುತ್ತುಮುತ್ತಲಿನ ಎಲ್ಲಾ ಊರಿನವರೂ ಸೇರಿ, ಗ್ರಾಮಗಳ ಹಿರಿಯರ ಜತೆಯಲ್ಲಿ ಸುಖದುಃಖ ಹೇಳಿಕೊಳ್ಳುವುದು ವಾಡಿಕೆ. ಅದರಂತೆ ಆ ದಿನವೂ ಅಲ್ಲಿ ಅನೇಕರು ಸೇರಿದ್ದರು. ಕಟ್ಟೆಯ ಮೇಲೆ ಗ್ರಾಮದ ಹಿರಿಯನೊಂದಿಗೆ ನಾಲ್ವರು ದೊಡ್ಡವರು ಸಹಾ ಕುಳಿತಿದ್ದರು. ಗ್ರಾಮದ ಹಿರಿಯರು ಆ ನಾಲ್ವರನ್ನೂ ಉಳಿದವರಿಗೆ ಪರಿಚಯ ಮಾಡಿಸುತ್ತ, "ಇವರು ನಮ್ಮ ನೆರೆಯ ಗ್ರಾಮಗಳಿಂದ ಬಂದ ಗ್ರಾಮಗಳ ಮುಖ್ಯಸ್ಥರು. ನಮ್ಮ ರದ್ದುರಾಜನ ಹುಚ್ಚು ಬುದ್ಧಿಯ ಕಾರಣದಿಂದಾಗಿ ರಾಜ್ಯದೊಳಗೆ ಎಲ್ಲರೂ ನಮ್ಮ ಹಾಗೇ ನಾನಾ ಯಾತನೆಗಳನ್ನು ಅನುಭವಿಸಿಕೊಂಡಿದ್ದಾರೆ. ಗುರುಕುಲದಿಂದ ಬಂದ ಹುಡುಗನೊಬ್ಬನು ಸೋಮಾರಿಯಾದರೆ, ಉಳಿದ ಎಲ್ಲಾ ಶಿಷ್ಯರೂ ಹಾಗೆಯೇ ಆಗುತ್ತಾರೆಂದು ಊಹಿಸಿ ರಾಜನು ಗುರುಕುಲಗಳನ್ನೇ ರದ್ದುಮಾಡಿದ್ದಾನೆ. ಈಗ ನಮ್ಮ ಹುಡುಗರು ಗುರುಕುಲದ ವಿದ್ಯಾಭ್ಯಾಸವಿಲ್ಲದ್ದರಿಂದ ಅಜ್ಞಾನಿಗಳೂ, ಮೂರ್ಖರೂ, ಕಳ್ಳರೂ ಆಗುತ್ತ, ನಮ್ಮ ಕೊರಳಿಗೆ ಗುಂಡುಗಲ್ಲುಗಳಾಗಿಬಿಟ್ಟರು. ಹೀಗಾದರೆ ಹೇಗೆ?" ಎಂದನ .

ಆಗ ಪಕ್ಕದಲ್ಲಿದ್ದ ಗ್ರಾಮದ ಮುಖ್ಯಸ್ಥನು ಆ ಮಾತನ್ನೇ ಮುಂದುವರಿಸುತ್ತ, "ಅಯ್ಯಗಳಿರಾ! ಎಲ್ಲರೂ ಶ್ರದ್ಧೆಯಿಂದ ಕೇಳಬೇಕು. ಈಗ ದೇಶ

ರಕ್ಷಣೆ ಎಂದರೆ, ನಮ್ಮೆಲ್ಲರ ರಕ್ಷಣೆಯ ಸಮಸ್ಯೆಯಾಗಿ ಎದ್ದುಕೊಂಡಿದೆ. ರಾಜನು ಸೈನಿಕ ಶಾಖೆಯನ್ನೇ ರದ್ದು ಮಾಡಿದ್ದರಿಂದ, ಇದುವರೆಗೂ ನಮ್ಮ ರಾಜನಿಗೆ ಕಪ್ಪ ಕಟ್ಟುತ್ತಾ ಬಂದು ಮುದುಡಿಕೊಂಡಿದ್ದ ಸಾಮಂತನೊಬ್ಬ ನಮ್ಮ ದೇಶದ ಮೇಲೆ ಯುದ್ಧಕ್ಕೆ ಬರಲಿದ್ದಾನೆ" ಎಂದನು.

"ಭೇಷಾಯಿತು ಬಿಡಿ. ಕವಿಗಳೂ, ಕಲಾಕಾರರೂ ನಮ್ಮ ರದ್ದುರಾಜನಿಂದ ನಷ್ಟಗಾದರು. ಅವರಲ್ಲೊಬ್ಬ ಮಹಾಕವಿ ನಮ್ಮ ಗ್ರಾಮದವನೇ" ಎಂದುದನ್ನು ಕೇಳಿ ಮತ್ತೊಬ್ಬ ಗ್ರಾಮದವನು ಆವೇಶದಿಂದ, "ಅಂಥವರೆಲ್ಲಾ ಪಕ್ಕದ ರಾಜ್ಯಗಳಿಗೆ ಹೋಗಿಬಿಟ್ಟರಲ್ಲ! ಇದು ನಮಗೆಲ್ಲರಿಗೂ ಬಹಳ ಅವಮಾನದ ವಿಷಯ. ನಾವು ಈ ಮರದ ಕೆಳಗೆ ಸೇರಿಕೊಂಡು ಗೋಳಾಡಿ ಪ್ರಯೋಜನವಿಲ್ಲ. ಅಶಾಶ್ವತವಾದ ರಾಜವಂಶವನ್ನೂ, ನಮ್ಮನ್ನೂ, ನಮ್ಮ ರಾಜ್ಯವನ್ನೂ ಶಾಶ್ವತವಾಗಿ ಉಳಿಸುವವರು ಕವಿಗಳು, ಕಲಾಕಾರರು. ಅಂಥವರಿಲ್ಲದ ದೇಶ ನಮಗೇಕೆ?" ಎಂದನು.

ಮೊದಲನೇ ಗ್ರಾಮದ ಹಿರಿಯನು ಅವರೆಲ್ಲರನ್ನೂ ನೋಡಿ, "ನಾನು ಹೇಳುವುದು ಕಷ್ಟ ನಷ್ಟಗಳನ್ನು ತಾಳಿಕೊಂಡು ಕಾರ್ಯವನ್ನು ಸಾಧಿಸಬೇಕಾದ ನಾವೆಲ್ಲರೂ ಕೂಡಿ, ದೇಶದ ಎಲ್ಲಾ ಗ್ರಾಮಪ್ರಮುಖರಿಗೂ ಹೇಳಿ, ದೇಶದವರನ್ನೆಲ್ಲಾ ಒಂದುಗೂಡಿಸಿ ಈ ರದ್ದುರಾಜನನ್ನೇ ರದ್ದುಮಾಡಿಸಿ, ಬೇರೊಬ್ಬ ಯೋಗ್ಯನನ್ನು ಆರಿಸಿಕೊಳ್ಳಬೇಕು. ಹಾಗೆ ಆರಿಸಲ್ಪಡುವವನು ನಮ್ಮಗಳ ಕಷ್ಟ ಸುಖಗಳನ್ನು ಮುಂದಟ್ಟು ಮಾಡಿಕೊಂಡವನಾಗಿರಬೇಕು" ಎಂದನು.

ಅದನ್ನು ಕೇಳಿ ಅಲ್ಲಿ ಸೇರಿದವರೆಲ್ಲರೂ "ಸೈ ಸೈ" ಎಂದು ಕೂಗಿ ಘೋಷವೆಬ್ಬಿಸಿ ಚಪ್ಪಾಳೆ ತಟ್ಟಿದರು. ಇದನ್ನು ನೋಡುತ್ತಿದ್ದ ಕುಮಾರವರ್ಮನಿಗೆ ತಲೆ ತಿರುಗಿತು. ಕೂಡಲೇ ಮಂತ್ರಿಯೊಂದಿಗೆ ರಾಜಧಾನಿಗೆ ಹೋಗಿ ಸೇರಿಕೊಂಡನು.

ಆಮೇಲೆ ಮಂತ್ರಿ ಅನಂತಮಿಶ್ರನೊಂದಿಗೆ ಆಲೋಚನೆಮಾಡಿ, ಅವನ ಸಲಹೆಯಂತೆ ರದ್ದು ಮಾಡಿದ ಶಾಖೆಗಳೆಲ್ಲವನ್ನೂ ಮತ್ತೆ ಮೊದಲಿನಂತೆ ಸ್ಥಾಪಿಸಿ ಪ್ರಕಟಪಡಿಸಿದನು. ಪ್ರಜೆಗಳ ಸಹಾಯದಿಂದ ಬಹು ಬೇಗದಲ್ಲೇ ದೊಡ್ಡ ಸೇನೆಯನ್ನು ಕೂಡಿಸಿದನು, ಸಾಮಂತನಾದ ಶುಕ್ರಪಾಲನ ರಾಜ್ಯವನ್ನು ಆಕ್ರಮಿಸಿ ಅವನನ್ನು ಅಲ್ಲಿಂದ ಓಡಿಸಿದನು. ಕವಿ ಪಂಡಿತ ಕಲಾಕಾರರನ್ನೆಲ್ಲಾ ಕರೆಯಿಸಿ, ಮೊದಲಿಗಿಂತ ಹೆಚ್ಚು ಗೌರವಾದರಗಳನ್ನು ತೋರಿಸಿದನು.

ಹೀಗಾಗಿ ಪ್ರಜೆಗಳಲ್ಲಿ ಕುಮಾರವರ್ಮ ರಾಜನನ್ನು ರದ್ದುಪಡಿಸಬೇಕೆಂಬ ಅಭಿಪ್ರಾಯ ಹೋಯಿತು. ಅವನ ಮೇಲೆ ಎಲ್ಲರಿಗೂ ಭಕ್ತಿ ಗೌರವಗಳೆದ್ದುವು.





# ತೀರದ ಕೋರಿಕೆ

ಒಂದು ಊರಿನಲ್ಲಿ ಒಬ್ಬ ತಾತಯ್ಯನಿದ್ದ. ಶ್ರೀಹರಿ ಎಂಬ ಮೊಮ್ಮಗನಿಂದಲೇ ಅವನು ತಾತಯ್ಯನಾದನು. ಶ್ರೀಹರಿಯ ತಂದೆ ತಾಯಿಯರು ಅವನ ಬಾಲ್ಯದಲ್ಲಿಯೇ ತೀರಿ ಹೋಗಿಬಿಟ್ಟರು. ತಾತಯ್ಯನೇ ಶ್ರೀಹರಿಯನ್ನು ಬೆಳೆಸಬೇಕಾಯಿತು. ಆ ತಾತಯ್ಯನಿಗಾದರೂ ಒಂದು ಸಣ್ಣ ಮನೆಯ ಹೊರತು ಮತ್ತೇನೂ ಇರಲಿಲ್ಲ. ಅವನು ಕೂಲಿನಾಲಿ ಮಾಡುತ್ತ, ಅದಕ್ಕೂ ಶಕ್ತಿ ಇಲ್ಲದಾದಾಗ ಭಿಕ್ಷೆ ಬೇಡುತ್ತ ತನ್ನ ಹೊಟ್ಟೆಯನ್ನೂ, ಮೊಮ್ಮಗನ ಹೊಟ್ಟೆಯನ್ನೂ ತುಂಬಿಸಿಕೊಂಡಿದ್ದ. ಕೊಂಡಾಟದ ಮೊಮ್ಮಗನಾದ್ದರಿಂದ ತಾತಯ್ಯ ಕೂಲಿನಾಲಿಗೆ ಹೋಗುವಾಗಲೂ, ಕಡೆಗೆ ಭಿಕ್ಷೆಗೆ ಹೋಗುವಾಗಲೂ ಶ್ರೀಹರಿಯನ್ನು ತನ್ನೊಂದಿಗೆ ಕರೆದೊಯ್ಯಲಿಲ್ಲ. ಅವನಿಗೆ ಯಾವ ವೃತ್ತಿಯನ್ನೂ ಕಲಿಸುವ ಗೊಡವೆಗೇ ಹೋಗಲಿಲ್ಲ. ಆ ಕಾರಣದಿಂದ ತಾತಯ್ಯ ಹಠಾತ್ತಾಗಿ ಸತ್ತುಹೋದ ಮೇಲೆ, ಇಪ್ಪತ್ತು ವರ್ಷ ವಯಸ್ಸಿನ ಶ್ರೀಹರಿ ದಿಕ್ಕುಗೆಟ್ಟ.

ತಾತಯ್ಯನ ಕರಡಿಗೆಯಲ್ಲಿದ್ದ ಸ್ವಲ್ಪ ಹಣದಿಂದ ಶ್ರೀಹರಿ ಮೂರು ತಿಂಗಳ ದಿನಗಳನ್ನು ದೂಡಿದನು. ಆಮೇಲೆ ತನಗೆ ಏನಾದರೂ ಕೆಲಸಬೇಕೆನ್ನುತ್ತಾ ಊರೊಳಗೆಲ್ಲ ತಿರುಗಾಡಿ ಕೇಳಿ ನೋಡಿದನು. ಅವನನ್ನು ನೋಡಿದವರು ನಕ್ಕು, "ಮುದುಕ ಸಾಯುವವರೆಗೆ ಅವನು ಸಂಪಾದಿಸಿದ ಹಣದಿಂದ ತಿಂದು ಕೂತವನು ನೀನು. ನಿನ್ನಿಂದಾಗುವ ಕೆಲಸವೇನೆಂದು ನಮಗೆ ಗೊತ್ತಿದೆ, ನಡೆ!" ಎಂದುಬಿಟ್ಟರು.

ಶ್ರೀಹರಿಗೆ ಆ ಊರೇ ರೋಸಿಹೋಯಿತು. ಉಳಿದಿದ್ದ ಆ ಮನೆಯನ್ನು ಸಿಕ್ಕಿದಷ್ಟು ಹಣಕ್ಕೆ ಮಾರಿ, ಆ ಹಣದೊಂದಿಗೆ ಬೇರೊಂದು ಊರಿಗೆ ಹೋಗಿ ಸೇರಿದನು. ಅಲ್ಲಿ ಅವನು ಒಂದು ಮನೆಯ ಕೋಣೆಯನ್ನು ಬಾಡಿಗೆಗೆ ಮಾತಾಡಿ, ಮತ್ತೆ ಕೆಲಸ ಹುಡುಕುವ ಪ್ರಯತ್ನಕ್ಕೆ ತೊಡಗಿದನು.

ಅಲ್ಲಿಯೂ ಅವನಿಗೆ ನಿರಾಶೆಯೇ ಇದಿರಾಯಿತು. "ಕೆಲಸ ಬೊಗಸೆ ಇಲ್ಲೇನಿಲ್ಲ" ಎನ್ನುವವರೇ ಎಲ್ಲರೂ.

ಹೀಗೆ ತಿರುಗಿ ತಿರುಗಿ ಪಾದಗಳ ಚರ್ಮ ಸವೆದುದೇ ಬಂತು. ಉಳಿದ ಸ್ವಲ್ಪ ಹಣವೂ ತೀರಿ ಹೋಗುವಷ್ಟು ಸಣ್ಣದಾಯಿತು. ಈ ಚಿಂತೆಯಿಂದ ಅವನಿಗೆ ರಾತ್ರಿಯಲ್ಲಿ ನಿದ್ದೆಯೇ ಬರಲಿಲ್ಲ. ಅಂತಹ ಒಂದು ರಾತ್ರಿಯಲ್ಲಿ ಶ್ರೀಹರಿ ನಿದ್ದೆಬಾರದೆ, ಹೊತ್ತು

ಎಂ. ಕೆ. ಈಶ್ವರರಾವ್



ಹೋಗದೆ, ಕೋಣೆಯ ಬಾಗಿಲನ್ನು ತೆರೆದು ಜಗಲಿಗೆ ಬಂದನು. ಶುಕ್ಲಪಕ್ಷದ ಚಂದ್ರಪ್ರಕಾಶದಲ್ಲಿ ಬೆಳುದಿಂಗಳು ಎಲ್ಲೆಲ್ಲೂ ಹರಡಿಕೊಂಡಿತ್ತು. ಆ ಬೆಳಕಿನಲ್ಲಿ, ಆ ಮನೆಯ ಯಜಮಾನಿಯ ಮಗಳು ಪ್ರಮೀಳೆ ಸದ್ದಿಲ್ಲದೆ ಹೊರಗೆ ಬಂದು ಅಂಗಳದಾಚೆ ಗಿರುವ ಬಾವಿಗೆ ಹಾರಲು, ಬಾವಿ ದಂಡೆಯ ಮೇಲೇರುವುದನ್ನು ನೋಡಿದನು.

ಶ್ರೀಹರಿ ಗಾಬರಿಯಾಗಿ ಓಡಿಹೋಗಿ ಅವಳ ಕೈ ಹಿಡಿದು, "ಇದೇನು ಕೆಲಸ ? ನಿನಗೇನಾದರೂ ಬುದ್ಧಿ ಕೆಟ್ಟಿತೆ ?" ಎಂದನು ಕೋಪದಿಂದ.

ಪ್ರಮೀಳೆ ಬಿಕ್ಕಿ ಬಿಕ್ಕಿ ಅಳುತ್ತ, ತನ್ನ ಕಷ್ಟಗಳನ್ನು ಕುರಿತು ಮೆಲ್ಲನೆ ಅವನೊಂದಿಗೆ ಹೇಳಿದಳು. ಅವಳಿಗೆ ಹೆತ್ತ ತಾಯಿ ಇಲ್ಲ. ಸವತಿ ತಾಯಿಗೆ ಮದುವೆಯ ವಯಸ್ಸು ಬಂದ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಪ್ರಮೀಳೆಯನ್ನು ಶ್ರೀಮಂತನಾದೊಬ್ಬ ಮುದುಕನಿಗೆ ಕೊಟ್ಟು ಮದುವೆ ಮಾಡಿ, ಅವನು ಕೊಡುವ ಹಣದಿಂದ ತನ್ನ ಮಗಳಂದಿರ ಮದುವೆ ಮಾಡಲು ನೋಡುತ್ತಿದ್ದಾಳೆ ಸವತಿತಾಯಿ.

"ಅಂತಹ ಮುದುಕನೊಂದಿಗೆ ಮದುವೆಯಾಗುವುದಕ್ಕಿಂತ ಸಾಯುವುದು ಒಳ್ಳೇದು. ನನ್ನನ್ನು ಬಿಡಿ" ಎಂದಳು ಪ್ರಮೀಳೆ.

"ಕಷ್ಟಗಳಿಂದ ಬಿಡುಗಡೆ ಬೇಕಾದರೆ ತುಂಬಾ ಸಹನೆ ಬೇಕು. ಅವಸರಪಟ್ಟು ಬಾವಿಗೆ ಹಾರಿಬಿಡುವುದಲ್ಲ. ಇದು ಸುಲಭ ದಾರಿಯಾಗಿರುತ್ತಿದ್ದರೆ ನಾನು ಎಂದೋ ಆ ದಾರಿ ಹಿಡಿದು ಬಿಡುತ್ತಿದ್ದೆ. ಹುಟ್ಟಿದ ಮೇಲೆ ಸಾಯುವವರೆಗೂ ಬದುಕಿರಲಿಕ್ಕೇ ನೋಡಬೇಕು" ಎಂದನು ಶ್ರೀಹರಿ.

ಪ್ರಮೀಳೆ ಅವನ ಮುಖವನ್ನು ಸ್ವಲ್ಪಹೊತ್ತು ದಿಟ್ಟಿಸಿ ನೋಡಿ, "ನನ್ನ ತಲೆಗೆ ನೇರಾಗಿ ಕಷ್ಟವು ಮುಗುಚಿ ಬೀಳಲು ತಯಾರಾಗಿರುವಾಗ ಇಂಥ ನೀತಿವಾಕ್ಯಗಳಿಂದ ಪ್ರಯೋಜನವಿಲ್ಲ. ನಾನು ಎಷ್ಟು ತಾಳ್ಮೆಯಿಂದಿದ್ದರೂ ಇನ್ನೊಂದು ವಾರದೊಳಗೆ ನನ್ನ ಮದುವೆ ಮುದುಕನೊಂದಿಗೆ ಆಗುವುದು ಖಂಡಿತ" ಎಂದು ಹೇಳಿ ಒಂದು ಕ್ಷಣ ನಿಂತು, "ನೀವೇ ನನ್ನನ್ನು ಮದುವೆ ಮಾಡಿಕೊಂಡು ಈ ಕಷ್ಟದಿಂದ ನನ್ನನ್ನೇಕೆ ಪಾರುಮಾಡಬಾರದು ?" ಎಂದಳು ಮೆಲ್ಲದನಿಯಿಂದ.

ಆ ಸಮಯಕ್ಕೆ ಅವಳ ಆತ್ಮಹತ್ಯಾ ಪ್ರಯತ್ನವನ್ನು ನಿಲ್ಲಿಸಲು ಶ್ರೀಹರಿ ಹಾಗೇ ಮಾಡುತ್ತೇನೆಂದು ಹೇಳಿ ಅವಳನ್ನು ಮನೆಯೊಳಗೆ ಕಳುಹಿಸಿದನು. ಮರುದಿನ ಬೆಳಿಗ್ಗೆ ಅವಳ ಮಲತಾಯಿಯ ಹತ್ತಿರ ಹೋಗಿ, ಮದುವೆಯ ಪ್ರಸ್ತಾಪವೆತ್ತಿ, ಪ್ರಮೀಳೆಯನ್ನು ಮಾಡಿಕೊಳ್ಳಲು ತಾನು ಸಿದ್ಧನೆಂದು ಹೇಳಿದನು.

"ಏನು ಸಿದ್ಧತೆ ನಿನ್ನದು ? ಕೆಲಸ ಬೊಗಸೆ ಏನೂ ಇಲ್ಲ. ಆಸ್ತಿಪಾಸ್ತಿ ಅಂದರೆ ಬರೀ ಸೊನ್ನೆ. ಇಂತಹ ನೀನು ಮದುವೆ ಪ್ರಸ್ತಾಪವೆತ್ತುವುದು



ಬುದ್ಧಿಯಿರುವ ಮಾತೇನಾ ? ಮೊದಲು ಹೋಗಿ ಕಳೆದ ತಿಂಗಳ ಬಾಡಿಗೆ ತಂದಿಡು. ಇಲ್ಲದಿದ್ದರೆ ಕೋಣೆ ಖಾಲಿಮಾಡಿ ಹೋಗಿಬಿಡು" ಎಂದಳು ಪ್ರಮೀಳೆಯ ತಾಯಿ ಕೋಪದಿಂದ.

ಶ್ರೀಹರಿ ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟು ಹೋದನು. ಆ ದಿನವಿಡೀ ಏನೋ ಒಂದು ಕೆಲಸಕ್ಕಾಗಿ ಅವನು ಮಾಡಿದ ಪ್ರಯತ್ನ ಯಾವುದೂ ಫಲಿಸಲಿಲ್ಲ. ಅದರಿಂದ ಕೋಣೆಗೆ ಹಿಂದಿರುಗಲು ಮನಸ್ಸು ಬಾರದೆ, ಊರಿಗೆ ದೂರವಿರುವ ಗೊಂಡಡವಿಯ ಕಡೆಗೆ ಹೋದನು. ಆಗ ಕತ್ತಲಾಗತೊಡಗಿತು. ಒಂದು ಮರದ ಕೆಳಗೆ ಕುಳಿತು, ಹಾಗೆಯೇ ತೂಕಡಿಸಿ ಅಲ್ಲೇ ಮಲಗಿದನು. ನಿದ್ದೆ ಹತ್ತಿಕೊಂಡಿತು.

ಸುಮಾರು ನಡುರಾತ್ರಿಯ ಹೊತ್ತಿನಲ್ಲಿ ಪಕ್ಕದಲ್ಲೇ ದೊಡ್ಡದೊಂದು ಶಬ್ದವಾದುದರಿಂದ ಶ್ರೀಹರಿಗೆ ಎಚ್ಚರವಾಯಿತು. ಅವನ ಇದಿರಿನಲ್ಲಿ ನಿಂತಿರುವ ಆಕಾರವು ಮುದಿ ಪಿಶಾಚಿಯದು !

"ಎಂಥಾ ಮನುಷ್ಯನಪ್ಪ ಇವನು ! ಇಂಥಾ ಹೊತ್ತಿನಲ್ಲಿ ನನ್ನಂಥ ಭಯಂಕರ ಪಿಶಾಚಿಗಳು ನಡೆಯುವ ಪ್ರದೇಶಕ್ಕೆ ಬಂದು ನಿಶ್ಚಿಂತೆಯಿಂದ ನಿದ್ದೆ ಮಾಡುವ ಇವನ ಧೈರ್ಯ ಮೆಚ್ಚಲೇಬೇಕು. ಲೋ ! ನರನೇ ! ಮೊದಲು ಇಲ್ಲಿಂದ ಏಳು. ಇದು ನನ್ನ ಜಾಗ. ನನಗೆ ಬೇರೆ ಕಡೆಗೆ ಹೋಗಲು ಇಷ್ಟವಿಲ್ಲ" ಎಂದಿತು ಮುದಿಪಿಶಾಚಿ.

ಎಲ್ಲಾ ವಿಧದಲ್ಲಿಯೂ ಬೇಸತ್ತು ನಿರಾಶೆ ತಾಳಿದ್ದ ಶ್ರೀಹರಿ ಪಿಶಾಚಿಯನ್ನು ನೋಡಿ ಹೆದರದೆ, "ನಿನಗಿಂತ ಭಯಂಕರರಾದ ಮನುಷ್ಯರ ಮಧ್ಯದಲ್ಲಿ ಇರಲಿಕ್ಕಾಗದೆ ಇಲ್ಲಿಗೆ ಬಂದಿದ್ದೇನೆ ನಾನು. ಸರಿಬಿಡು, ನಿನ್ನ ಜಾಗದಲ್ಲಿ ನೀನೇ ಇರು. ನಾನು ಬೇರೆ ಮರದ ಕೆಳಗೆ ಹೋಗುತ್ತೇನೆ. ನನ್ನಿಂದ ನಿನಗೇಕೆ ಕಷ್ಟ ?" ಎನ್ನುತ್ತಾ ಎದ್ದು ನಿಂತನು.

ಮುದಿಪಿಶಾಚಿ ಅವನನ್ನು ನೋಡಿ, "ಸ್ವಲ್ಪ ಇರು. ಮನುಷ್ಯರನ್ನು ಕುರಿತು ಇಷ್ಟು ಹೀನವಾಗಿ ಹೇಳುವಿಯಲ್ಲಾ ! ಹಾಗೇನು ಕಷ್ಟ ಬಂತು ನಿನಗೆ ?" ಎಂದು ಕೇಳಿತು.

ಶ್ರೀಹರಿ ತನ್ನ ಸಂಗತಿಯನ್ನೆಲ್ಲಾ ಪಿಶಾಚಿಯೊಂದಿಗೆ ಹೇಳಿ, "ಎಷ್ಟು ಕೈ ಕಾಲಿಗೆ ಬಿದ್ದು ಬೇಡಿಕೊಂಡರೂ ಬದುಕುವ ದಾರಿ ಕಾಣಲಿಲ್ಲ. ನನ್ನಂಥ ಸತ್ಯ ಮಾರ್ಗದವನನ್ನು ಯಾರೂ ನಂಬುವುದಿಲ್ಲ" ಎಂದನು.

ಆ ಮಾತಿಗೆ ಪಿಶಾಚಿ ಗಟ್ಟಿಯಾಗಿ ನಕ್ಕು "ನನ್ನ ನರಮನುಷ್ಯ ಕಾಲದಲ್ಲಿಯೂ ಅಷ್ಟೇ ಬಿಡು. ಚಿಕ್ಕಂದಿನ ನಿನ್ನ ಬೆಳವಣಿಕೆಯೇ ತಪ್ಪಾಗಿ ಹೋಗಿದೆ ಪಾಪ ! ನಿನ್ನ ಕಷ್ಟಗಳನ್ನು ನಾನು ತೀರಿಸುತ್ತೇನೆ" ಎಂದು ಹೇಳಿ ಮರದ ಪೊಟರೆಯೊಳಗಿನಿಂದ ಚೆನ್ನಾಗಿ ತುಕ್ಕು ಹಿಡಿದುಹೋದ ತಾಮ್ರದ ಉಂಗುರವೊಂದನ್ನು ತಂದು "ಇಕೋ, ಇದನ್ನು



ನಿನ್ನ ಬೆರಳಿಗೆ ಹಾಕಿಕೊಂಡು ಯಾರ ಹತ್ತಿರ ಏನು ಕೇಳಿದರೂ ಮರುಮಾತಿಲ್ಲದೆ ಕೊಟ್ಟುಬಿಡುತ್ತಾರೆ. ಆದರೆ ಒಂದು ಸಂಗತಿ ನೆನಪಿಟ್ಟುಕೋ. ಇದರ ಮಹತ್ವ ಮೂರು ಸಾರಿಗೆ ಮಾತ್ರವೇ ಇರುತ್ತದೆ. ಆಮೇಲೆ ಇರದು" ಎಂದು ಹೇಳಿ ಉಂಗುರವನ್ನು ಶ್ರೀಹರಿಗೆ ಕೊಟ್ಟು, ಮುದಿ ಪಿಶಾಚಿಯು ಅಲ್ಲೇ ಮಾಯವಾಯಿತು.

ಶ್ರೀಹರಿ ಉಂಗುರವನ್ನು ಬೆರಳಿಗೆ ಹಾಕಿಕೊಂಡು ಊರಿನ ಕಡೆಗೆ ಹಿಂದಿರುಗಿದನು. ಆಮೇಲೆ ಒಬ್ಬ ದೊಡ್ಡ ಧನಿಕನಾದ ವ್ಯಾಪಾರಸ್ಥನ ಬಳಿಗೆ ಹೋಗಿ, "ಅಯ್ಯಾ, ನನಗೆ ನಿಮ್ಮ ಹತ್ತಿರ ಒಂದು ಉದ್ಯೋಗ ಬೇಕು. ದಯಮಾಡಿ ಕೊಟ್ಟುಬಿಡಿ" ಎಂದನು.

ಈ ಮೊದಲು ಶ್ರೀಹರಿ ಕೇಳಿದಾಗ ಉದ್ಯೋಗವೇ ನಿಲ್ಲ ಹೋಗೆಂದ ಅದೇ ವ್ಯಾಪಾರಿ, ಉಂಗುರದ ಮಹಿಮೆಯಿಂದ, "ಅಗತ್ಯವಾಗಿ! ಈ ದಿನವೇ ಒಂದು ಕೆಲಸದಲ್ಲಿ ಸೇರಿಕೋ!" ಎಂದನು.

ಶ್ರೀಹರಿ ಅಲ್ಲಿ ಹೇಳಿದ ಕೆಲಸಮಾಡಿ, ಸಾಯಂಕಾಲವಾದ ಮೇಲೆ ಪ್ರಮಿಳೆಯ ಮನೆಗೆ ಹೋಗಿ, ಅವಳ ಸವತಿ ತಾಯಿಯೊಂದಿಗೆ, "ನನಗೆ ಉದ್ಯೋಗ ದೊರಕಿತು. ಪ್ರಮಿಳೆಯನ್ನು ನನಗೆ ಕೊಟ್ಟು ಮದುವೆ ಮಾಡಿರಿ" ಎಂದು ಕೇಳಿದನು.

"ಸಂತೋಷವಾಗಿ! ನೀನು ಅಳಿಯನಾಗುವುದು ನಮ್ಮ ಭಾಗ್ಯ! ಈ ವಾರದಲ್ಲೇ ಮದುವೆ ನಡೆಸುತ್ತೇನೆ" ಎಂದಳು ಪ್ರಮಿಳೆಯ ಸವತಿ ತಾಯಿ.

ಹೇಳಿದ ಹಾಗೆಯೇ ಶ್ರೀಹರಿಗೆ ಪ್ರಮಿಳೆಯೊಂದಿಗೆ ಮದುವೆಯಾಯಿತು.

ಮುಂದೆ ಹತ್ತು ದಿನಗಳು ಕಳೆದ ಮೇಲೆ ಪ್ರಮಿಳೆ ಶ್ರೀಹರಿಯೊಂದಿಗೆ, "ನನಗೇನೋ ಆಶ್ಚರ್ಯವಾಗಿದೆ. ಒಂದೇ ದಿನದಲ್ಲಿ ನನ್ನ ಸವತಿ ತಾಯಿಯ ಮನಸ್ಸು ಹೇಗೆ ಮಾರ್ಪಟ್ಟಿತು? ಥಕ್ಕನೆ ನಿಮಗೆ ಉದ್ಯೋಗವಾದರೂ ಹೇಗೆ ಸಿಕ್ಕಿತು?" ಎಂದು ಕೇಳಿದಳು.

ಶ್ರೀಹರಿ ನಡೆದ ಸಮಾಚಾರವನ್ನೆಲ್ಲಾ ಅವಳೊಂದಿಗೆ ಹೇಳಿ, "ಇದಕ್ಕೆಲ್ಲ ಮುದಿ ಪಿಶಾಚಿ ಕೊಟ್ಟ ತುಕ್ಕು ಹಿಡಿದ ತಾಮ್ರದ ಉಂಗುರವೇ ಕಾರಣ" ಎಂದನು.

ತುಕ್ಕು ಹಿಡಿದ ತಾಮ್ರದ ಉಂಗುರದ ಮಾತು ಕೇಳುತ್ತಲೇ ಪ್ರಮಿಳೆ, "ಅಯ್ಯೋ!" ಎಂದು ಕೂಗಿದಳು. ಶ್ರೀಹರಿ ಅವಳನ್ನು ಹಿಡಿದು ಏನಾಯಿತೆಂದು ಕೇಳಿದನು.

"ಬೆಳಿಗ್ಗೆ ಪೆಟ್ಟಿಗೆಯಲ್ಲಿ ಬಟ್ಟೆಗಳನ್ನೆಲ್ಲ ಸರಿಮಾಡಿಡುವಾಗ, ತುಕ್ಕು ಹಿಡಿದ ತಾಮ್ರದ ಉಂಗುರವನ್ನು ನೋಡಿದೆ. ಕೊಳಕು ಉಂಗುರವೆಂದುಕೊಂಡು ಮನೆ ಹಿಂದೆ ಬಿಸಾಕಿಬಿಟ್ಟೆ" ಎಂದಳು ಪ್ರಮಿಳೆ.

"ಅಷ್ಟೇ ತಾನೇ? ಅದಕ್ಕೇಕೆ ಗಾಬರಿ?" ಎಂದನು ಶ್ರೀಹರಿ ಸಮಾಧಾನದಲ್ಲೇ.

ಆ ಮಾತಿಗೆ ಪ್ರಮೀಳೆ ಸಿಡಕುಗೊಂಡು, "ಅಷ್ಟೊಂದು ಮಹಿಮೆಯ ಉಂಗುರವನ್ನಿಟ್ಟುಕೊಂಡು ನೀವು ಕೋರಿಕೊಂಡದ್ದು ಎರಡು ಉಪಯೋಗವಿಲ್ಲದ ಕೋರಿಕೆಗಳೇ. ನನ್ನ ಸವತೀ ತಾಯಿಯ ಹತ್ತಿರ ಆ ಮನೆಯನ್ನೇ ವರದಕ್ಷಿಣೆಯಾಗಿ ಕೇಳಬೇಕಿತ್ತು. ಆ ವ್ಯಾಪಾರಿಯ ಹತ್ತಿರ ವ್ಯಾಪಾರದ ಲಾಭದಲ್ಲಿ ಅರ್ಧಭಾಗ ಬೇಕೆಂದು ಕೇಳಬಹುದಿತ್ತು. ಈಗ ಮೊದಲು ಆ ಉಂಗುರವನ್ನು ಹುಡುಕಬೇಕು" ಎಂದು ಅತ್ತ ತಿರುಗಿದಳು.

ಶ್ರೀಹರಿ ಅವಳನ್ನು ನಿಲ್ಲಿಸಿ, ಆತುರ ಪಡಬೇಡ. ಯಾರು ಎಷ್ಟು ವರಗಳನ್ನು ಕೊಟ್ಟರೂ ನಮ್ಮ ಪ್ರಾಪ್ತಿ ಎಷ್ಟೋ ಅಷ್ಟೇ ನಮಗೆ ದಕ್ಕುತ್ತೆ. ನಮಗೆ ಇದಕ್ಕಿಂತ ಹೆಚ್ಚಿನ ಪ್ರಾಪ್ತಿ ಇಲ್ಲದ್ದರಿಂದಲೇ ನಿನಗೆ ಆ ಉಂಗರವನ್ನು ಬಿಸಾಡುವ ಬುದ್ಧಿ ಬಂತು" ಎಂದನು.

"ಅದಕ್ಕೆ ಇನ್ನೊಂದು ಕೋರಿಕೆ ತೀರಿಸುವ ಮಹಿಮೆ ಕೂಡಾ ಇದೆಯಷ್ಟೆ? ಈಸಾರಿ ನೀವು ಅದನ್ನು ಬೆರಳಿಗೆ ತಗಲಿಸಿಕೊಂಡು, ನಮ್ಮ ಜಮೀನ್ದಾರರ ಬಳಿಗೆ ಹೋಗಿ ಅರ್ಧ ಜಮೀನ್ ಕೊಡಬೇಕೆಂದು ಕೇಳಿರಿ" ಎಂದು ಪ್ರಮೀಳೆ ದೀಪ ಬೆಳಗಿಸಿಕೊಂಡು ಮನೆ ಹಿಂದುಗಡೆಯ ಕುಪ್ಪೆಯಲ್ಲಿ ಹುಡುಕಿ ಉಂಗುರವನ್ನು ತೆಗೆದುಕೊಂಡು ಬಂದಳು.

ಅವಳು ಆ ಉಂಗುರವನ್ನು ತನ್ನ ಬೆರಳಿಗೆ ಹಾಕಿಕೊಂಡು, "ಜಮೀನ್ದಾರರ ಹತ್ತಿರ ಅರ್ಧ ಜಮೀನು ಕೇಳಲು ನಿಮಗೆ ದಾಕ್ಷಿಣ್ಯವಾದೀತು. ನಾನೇ ಅವರ ಹತ್ತಿರ ಹೋಗಿ ಕೇಳುತ್ತೇನೆ. ನನಗೆ ಅವರ ಪರಿಚಯವಿದೆ. ಆಗಬಹುದಷ್ಟೆ?" ಎಂದಳು.

"ಹಾಗೆಯೇ ಕೇಳು" ಎಂದು ಶ್ರೀಹರಿ ದೊಡ್ಡ ದನಿಯಿಂದ ನಕ್ಕು, "ಇನ್ನು ಆ ಉಂಗುರವನ್ನು ಕುಪ್ಪೆಯ ಕಡೆಗೆ ಬಿಸುಡು. ಉಂಗುರವನ್ನು ಹಾಕಿಕೊಂಡು ನನ್ನೊಡನೆ ಕೋರಿಕೆ ಕೇಳಿದಿ. ಸರಿಯೆಂದೆನು. ಆದರಿಂದ ಉಂಗುರದ ಮೂರು ಮಹಿಮೆಗಳೂ ತೀರಿದುವು" ಎಂದನು.

ಉಂಗುರದ ಮಹಿಮೆ ಹೋಯಿತೆಂದು ಅರ್ಥವಾಗಿ ಪ್ರಮೀಳೆಗೆ ದುಃಖ ಬಂದಿತು. ಶ್ರೀಹರಿ ಅವಳಿಗೆ ಸಮಾಧಾನ ಹೇಳುತ್ತ, "ತೃಪ್ತಿಯಿಲ್ಲದೆ ಹೋಗುವುದೇ ದುಃಖಕ್ಕೆ ಕಾರಣ. ಇಪ್ಪತ್ತು ದಿನಗಳ ಕೆಳಗೆ ಮದುವೆಯಾದರೆ ಸಾಕೆಂದಿದ್ದೆ. ಮತ್ತೇನೂ ಕಷ್ಟವಿಲ್ಲವೆಂದಿದ್ದೆ. ಈಗ ಇನ್ನಷ್ಟು ಬೇಕೆಂದುಕೊಂಡು ದುಃಖಿಸುವೆ. ಅದಕ್ಕೇ ಮನುಷ್ಯನ ಕೋರಿಕೆ ತೀರುವಂತದ್ದಲ್ಲ ಅನ್ನುವುದು!" ಎಂದನು.

ಗಂಡನ ಮಾತಿನ ಸತ್ಯವನ್ನು ತಿಳಿದು ಪ್ರಮೀಳೆ "ಹೌದು. ನನ್ನ ಬುದ್ಧಿ ನೆನೆದರೆ ನನಗೇ ನಾಚಿಕೆಯಾಗುತ್ತದೆ" ಎಂದು ಕಣ್ಣೀರು ಒರೆಸಿಕೊಂಡಳು.





# ಇಬ್ಬರು ವಂಚಕರು

ಸಿಂಥಾ ಎಂಬ ದೊಡ್ಡ ನಗರದಲ್ಲಿ ದಾವೂಧ್ ಎಂಬೊಬ್ಬ ದೊಡ್ಡ ವರ್ತಕನಿದ್ದನು. ಅವನು ಒಂಟೆಯ ಮೇಲೆ ವ್ಯಾಪಾರದ ಸರಕುಗಳನ್ನು ಹಾಕಿಕೊಂಡು ಊರಿಂದೂರಿಗೆ ತಿರುಗುತ್ತ ವ್ಯಾಪಾರ ಮಾಡುವನು. ಅವನದು ಪ್ರಾಮಾಣಿಕವಾದ ಗುಣ. ಆದುದರಿಂದ ಅವನ ಸರಕುಗಳನ್ನು ಕೊಂಡು ಕೊಳ್ಳುವುದರಲ್ಲಿ ಯಾರಿಗೂ ಸಂದೇಹವಿಲ್ಲ. ಎಲ್ಲರ ನಂಬುಗೆಗೂ ಪಾತ್ರನಾದ ಅವನಿಗೆ ಅನೇಕ ಸ್ನೇಹಿತರೂ ಇದ್ದರು.

ಅದೇ ನಗರದಲ್ಲಿ ಇಬ್ಬರು ವಂಚಕ ಶಿಖಾಮಣಿಗಳೂ ಇದ್ದರು. ಅವರಿಬ್ಬರೂ ಸರಳ ಗುಣದ ಜನರನ್ನು ತಮ್ಮ ಸವಿಸವಿ ಮಾತುಗಳಿಂದ ನಂಬಿಸಿ ಮೋಸಪಡಿಸುತ್ತಿದ್ದರು. ಅನೇಕರಿಗೆ ಅವರ ಮೋಸವು ಗೊತ್ತಾದರೂ, ಅವರು ಬೇರೆ ಬೇರೆ ವೇಷಗಳಲ್ಲಿರುವುದರಿಂದ ಅವರ ಗುರುತು ಜನರಿಗೆ ಸಿಗುತ್ತಿದ್ದಿಲ್ಲ. ಆದರೂ ಕೆಲವರು ಅವರನ್ನು ಗುರುತಿಸಿ ಜಾಗರೂಕರಾಗಿರುತ್ತಿದ್ದರು.

ಅಂತಹ ವಂಚಕರಿಗೆ ದಾವೂದ್ ವರ್ತಕನ ಒಳ್ಳೆಯ ಗುಣಗಳು ಗೊತ್ತಾಗಿದ್ದವು. ಹೇಗಾದರೂ ಅವನನ್ನು ವಂಚಿಸಿ ಹೇರಳ ಲಾಭ ಗಳಿಸಬೇಕೆಂದು ಆ ವಂಚಕರಿಬ್ಬರೂ ಆಲೋಚಿಸಿಕೊಂಡರು.

ಒಂದು ದಿನ ದಾವೂದ್ ಒಂಟೆಯ ಮೇಲೆ ಸರಕು ಹಾಕಿ ಒಂದು ಪಟ್ಟಣಕ್ಕೆ ಹೊರಟನು. ಅದನ್ನು ನೋಡಿದ ವಂಚಕರಿಬ್ಬರೂ, ಅಗ್ಗದ ಬೆಲೆಯ ಕೀಳ್ಮಟ್ಟದ ಬಟ್ಟೆಗಳನ್ನು ಮೂಟೆಕಟ್ಟಿ ಒಂಟೆಗಳ ಮೇಲೆ ಹಾಕಿಕೊಂಡು ಅವನ ಹಿಂದೆಯೇ ಹೊರಟರು.

ಮಧ್ಯಾಹ್ನದ ಹೊತ್ತಿಗೆ ದಾವೂದ್ ವಿಶ್ರಾಂತಿ ತೆಗೆದುಕೊಳ್ಳಲು ಒಂದು ಮರದ ನೆರಳಿನಲ್ಲಿ ಕುಳಿತು ಕೊಂಡನು. ಆಗಲೇ ಅಲ್ಲಿಗೆ ಆ ಇಬ್ಬರು ವಂಚಕರೂ ಬಂದು, ದಾವೂದನಿಗೆ, ನಮಸ್ಕಾರಮಾಡಿ ಕುಶಲ ವಿಚಾರಿಸಿದರು. ಆಮೇಲೆ, "ಹಾಗಾದರೆ ನಮ್ಮ ಅದೃಷ್ಟ ! ನಿಮ್ಮ ಹಾಗಿನ ಅನುಭವಜ್ಞ ವರ್ತಕರು ಸಂಧಿಸಿದ್ದರಿಂದ ನಮಗೆ ದೊಡ್ಡ ಭಾರ ನೀಗಿದ ಹಾಗಾಗಿದೆ. ಈ ಪ್ರಯಾಣದಲ್ಲಿ ನೀವೇ ನಮಗೆ ದಾರಿ ತೋರಿಸಿ ಸಹಾಯ ಮಾಡಬೇಕು. ನಾವು ಹೊಸದಾಗಿ ಪ್ರಾರಂಭಿಸಿದ ವೃತ್ತಿ ಇದು" ಎಂದರು.

ದಾವೂದ್ ಅದಕ್ಕೇನು ಕಷ್ಟವೆಂದು ಮೆಲ್ಲಗೆ ಹೇಳುತ್ತ ಕಿರುನಗೆ ತೋರಿಸಿದನು. ಬಿಸಿಲಿನ ಝಳ

ಅರೇಬಿಯಾ ಕಥೆ

ತಗ್ಗಿದ ಮೇಲೆ ಮೂವರೂ ಅಲ್ಲಿಂದ ಮುಂದೆ ಪ್ರಯಾಣ ಹೊರಟರು. ಸಾಯಂಕಾಲದ ಸಮಯಕ್ಕೆ ಪಟ್ಟಣದ ಹೊರಗಿನ ಬದಿಯನ್ನು ಹೋಗಿ ಮುಟ್ಟಿದರು. ಹೆದ್ದಾರಿಯ ಬದಿಯಲ್ಲೇ ಒಂದು ಛತ್ರವಿದ್ದಿತು. ರಾತ್ರಿ ಅಲ್ಲಿದ್ದು, ಬೆಳಗಾದ ಮೇಲೆ ಪಟ್ಟಣಕ್ಕೆ ಪ್ರವೇಶಿಸೋಣವೆಂದುಕೊಂಡರು.

ದಾವೂದ್ ತನ್ನ ಒಂಟೆಯನ್ನು ಛತ್ರದ ಬದಿಯಲ್ಲಿದ್ದ ಒಂದು ಕಂಬಕ್ಕೆ ಕಟ್ಟಿ ಹಾಕಿದನು. ಸ್ನೇಹಿತರಿಬ್ಬರೂ ತಮ್ಮ ಬಟ್ಟೆಗಳ ಮೂಟೆಗಳನ್ನು ಛತ್ರದ ಕೋಣೆಯೊಳಗಿಟ್ಟು ಬೀಗ ಹಾಕಿ, "ಬನ್ನಿ, ನಾವು ಮೂವರೂ ಅಂಗಡಿ ಬೀದಿಯ ಕಡೆಗೆ ಹೋಗಿ, ಯಾವ ಭೋಜನಶಾಲೆಯಲ್ಲಾದರೂ ಊಟಮಾಡಿ ಬರೋಣ" ಎಂದರು ದಾವೂದನನ್ನು ನೋಡಿ ಉತ್ಸಾಹದಿಂದ.



ಅವರು ತಂಗಿದ ಛತ್ರದಿಂದ ಭೋಜನಶಾಲೆಗೆ ಹೋಗಲು ಹತ್ತಿರದ ದಾರಿಯೊಂದಿತ್ತು. ಅದು ಯಾವಾಗಲೂ ನಿರ್ಜನವಾಗಿರುವ ದಾರಿ ಎಂದು ಆ ವಂಚಕರಿಗೆ ಗೊತ್ತಿತ್ತು. ಭೋಜನಕ್ಕೆ ಹೋಗಿ ಬರುವ ಸಮಯದಲ್ಲಿ ದಾವೂದನನ್ನು ಕುತ್ತಿಗೆ ಹಿಸುಕಿಕೊಂದು, ಅವನ ಬೆಲೆಬಾಳುವ ಸರಕುಗಳನ್ನು ಅಪಹರಿಸಿಕೊಂಡು ಓಡಿಬಿಡುವುದು ಅವರ ಪಥಕವಾಗಿತ್ತು.

ಅವರ ಮಾತು ಕೇಳಿ ದಾವೂದ್, "ನೀವು ಹೋಗಿಬನ್ನಿ. ನನಗೆ ಈಗ ಹಸಿವೆ ಇಲ್ಲ. ನನ್ನ ಹತ್ತಿರ ಒಂದು ರೊಟ್ಟಿ ಕೂಡಾ ಇದೆ. ಇನ್ನೂ ಸ್ವಲ್ಪ ಹೊತ್ತಾದ ಮೇಲೆ ಅದನ್ನು ತಿಂದು ಮಲಗಿಕೊಳ್ಳುತ್ತೇನೆ. ನೀವು ಹೋಗಿ ಊಟ ಮಾಡಿಕೊಂಡು ಬನ್ನಿ" ಎಂದನು.

ಆ ಮಾತು ಕೇಳಿ ಮಿತ್ರರಿಬ್ಬರಿಗೂ ನಿರುತ್ಸಾಹವಾಗಲಿಲ್ಲ. ತಮ್ಮ ಕೆಲಸಕ್ಕೆ ರಾತ್ರಿಯಲ್ಲಿ ಅವಕಾಶ ಬಾರದೆ ಹೋಗುತ್ತೆಯೇ ಎಂದು ತಮ್ಮೊಳಗೆ ಸನ್ನೆ ಮಾಡಿಕೊಂಡರು. ಅವರು ಊಟಕ್ಕೆ ಹೊರಡುವ ಎತ್ತುಗಡೆಯಲ್ಲಿರುವುದನ್ನು ಗಮನಿಸಿದ ಛತ್ರದ ಯಜಮಾನನು, ಅಲ್ಲಿಗೆ ಮೂಡುದಿಕ್ಕಿನಲ್ಲಿ ಒಂದು ಭೋಜನಶಾಲೆಯೂ, ಪಶ್ಚಿಮ ದಿಕ್ಕಿನಲ್ಲಿ ಇನ್ನೊಂದು ಭೋಜನಶಾಲೆಯೂ, ಇರುವುದೆಂದು ಹೇಳಿದನು. ಎರಡೂ ಒಳ್ಳೆಯ ಭೋಜನಶಾಲೆಗಳೇ ಅಂತೆ.

"ಹಾಗಾದರೆ ನಾನು ಮೂಡು ದಿಕ್ಕಿನ ಭೋಜನಶಾಲೆಗೆ ಹೋಗಿ ಒಳ್ಳೆಯದೇನಿದೆಯೋ ಅದನ್ನು ತೆಗೆದುಕೊಂಡು ಬರುತ್ತೇನೆ. ನೀನು ಪಶ್ಚಿಮ ದಿಕ್ಕಿನ ಭೋಜನಶಾಲೆಯಿಂದ ಒಳ್ಳೆಯದಾಗಿ ತೋರಿದ್ದನ್ನು ತಾ, ಇಲ್ಲಿಯೇ ಕೂಡಿ ತಿಂದರಾಯಿತು" ಎಂದು ಒಬ್ಬನು ಇನ್ನೊಬ್ಬನೊಂದಿಗೆ ಹೇಳಿದನು.

"ಒಳ್ಳೆ ಆಲೋಚನೆ" ಎಂದನು ಇನ್ನೊಬ್ಬ. ಇಬ್ಬರೂ ಒಂದೊಂದು ದಿಕ್ಕಿಗೆ ಹೋಗಿ, ಒಂದು ಗಂಟೆಯ ಮೇಲೆ ಅವರಿಬ್ಬರೂ ಹಿಂದಿರುಗಿ ಬಂದರು. "ನೀನೇನು ತಂದೆ ?" ಎಂದೊಬ್ಬನು ಕೇಳಿದನು.

"ರೊಟ್ಟೀ ಹಾಲೂ ಚೆನ್ನಾಗಿತ್ತು, ತಂದೆ" ಎಂದನು ಎರಡನೆಯವನು.

"ಅರರೆ! ನಾನೂ ಅದನ್ನೇ ತಂದೆ" ಎಂದನು ಮೊದಲನೆಯವನು ಆಶ್ಚರ್ಯದಿಂದ.

"ಹಾಗಾದರೆ ಒಂದು ಮಾಡೋಣ. ನೀನು ರುಚಿ ನೋಡಿ ತಾನೇ ತೆಗೆದುಕೊಂಡಿದ್ದಿ? ಅದನ್ನು ನನಗೆ ಕೊಡು, ನಾನು ತಿನ್ನುತ್ತೇನೆ. ನಾನು ತಂದದ್ದನ್ನು ರುಚಿ ನೋಡಿದ್ದೇನೆ. ಅದನ್ನು ನೀನು ತಕ್ಕೋ" ಎಂದನು ಎರಡನೆಯವನು.

"ಅದ್ಭುತವಾದ ಮಾತು. ನಾನೂ ಹಾಗೇ ಹೇಳಬೇಕೆಂದಿದ್ದೆ" ಎಂದನು ಮೊದಲನೆಯವನು ನಗುತ್ತ.

ಇಬ್ಬರೂ ನಗುತ್ತ ಕೋಣೆಯೊಳಗೆ ಹೋಗಿ ಒಬ್ಬರು ತಂದುದನ್ನು ಮತ್ತೊಬ್ಬರು ತೆಗೆದು ಕೊಂಡು ತಿಂದು ಹಾಲು ಕುಡಿದರು.

ಸ್ವಲ್ಪಹೊತ್ತಿಗೆ ಇಬ್ಬರೂ ವಾಂತಿ ಮಾಡಿಕೊಳ್ಳುತ್ತ ಸಂಕಟದಿಂದ ಸಿಕ್ಕಾಬಟ್ಟೆ ನರಳುತ್ತ ಬಿದ್ದು ಹೊರಳತೊಡಗಿದರು. ಅವರ ಗಡಿಬಿಡಿ ಕೇಳಿ ಎಲ್ಲರೂ ಅಲ್ಲಿಗೆ ಓಡಿಬಂದರು. ಒಬ್ಬನನ್ನೊಬ್ಬ ಕೈಯೆತ್ತಿ ತೋರಿಸುತ್ತ ಇಬ್ಬರೂ ಹೊರಳಿ ಹೊರಳಿ ಪ್ರಾಣಬಿಟ್ಟರು.

ಅವರು ಅಂದುಕೊಂಡ ಹಾಗೆಯೇ ನಿಜವಾಗಿಯೂ ಮಿತ್ರರ ಮನಸ್ಸುಗಳೆರಡೂ ಒಂದೇ ವಿಧವಾಗಿ ಆಲೋಚನೆ ಮಾಡಿದುವು. ಆಹಾರ ತೆಗೆದುಕೊಂಡು ಬರಲು ಹೋದಾಗ, ದಾವೂದನ ಸರಕುಗಳನ್ನು ಅಪಹರಿಸಿ, ಅದನ್ನು ಇಬ್ಬರೂ ಹಂಚಿಕೊಳ್ಳುವಾಗ, ಎರಡನೆಯವನಿಗೆ ಭಾಗ ಕೊಡುವುದನ್ನು ತಪ್ಪಿಸಲು ಆಲೋಚನೆ ಮಾಡಿದರು. ಇಬ್ಬರೂ ಹಾಲಿನಲ್ಲಿ ವಿಷ ಬೆರೆಸಿದರು. ಅದರ ಫಲಿತವಾಗಿ ಇಬ್ಬರೂ ಪ್ರಾಣಬಿಟ್ಟರು.

ತನ್ನೊಂದಿಗೆ ಪ್ರಯಾಣಮಾಡಿದ ಇಬ್ಬರು ಮಿತ್ರರೂ ಸತ್ತು ಹೋದುದನ್ನು ನೋಡಿ ದಾವೂದ್ ಬಹಳ ದುಃಖಿಸಿದನು. ಮತ್ತೆ ಸ್ವಲ್ಪ ಹೊತ್ತಿಗೆ ಅಲ್ಲಿಗೆ ಬಂದ ವ್ಯಾಪಾರಿಗಳೊಂದಿಗೆ, "ಅಯ್ಯೋ ಪಾಪ! ಆ ಮಿತ್ರರಿಬ್ಬರೂ ನಮ್ಮ ಊರಿನ ವರ್ತಕರೇ!" ಎಂದನು ಅನುತಾಪದಿಂದ.

ಆ ವರ್ತಕರು ಆ ಮೃತದೇಹಗಳನ್ನು ಪರೀಕ್ಷಿಸಿ ನೋಡಿ, "ಇವರು ವರ್ತಕರೇನು? ಇವರಿಬ್ಬರೂ ಬೇರೆ ಬೇರೆ ವೇಷದಿಂದ ವಂಚಿಸುವ ದೊಡ್ಡ ಮೋಸಗಾರರು. ಮಹಾ ಘಾತಕರು. ಇವರ ಬಟ್ಟೆ ಗಂಟು ನೋಡಿದರೆ ತಿಳಿಯುತ್ತದೆ!" ಎಂದು ಆ ವಂಚಕರ ವಿವರಗಳನ್ನು ಹೇಳಿದರು.

ಅದನ್ನು ಕೇಳಿದ ಮೇಲೆ ದಾವೂದ್, ಆ ವಂಚಕರ ಪಥಕವು ಏನಿರಬಹುದೆಂದು ಸ್ವಲ್ಪ ಮಟ್ಟಿಗೆ ಊಹಿಸಲು ಸಾಧ್ಯವಾಯಿತು.





# ಶಿವಪುರಾಣ

ತಾರಕಾಸುರನು ತನಗೆ ಬಂದ ಮಹಾ ಕೋಪಾವೇಶವನ್ನು ಹತ್ತೊತ್ತಿಕೊಂಡು, ತನ್ನ ಧ್ಯಾನ ಭವನಕ್ಕೆ ಹೋಗಿ ಶಿವಪಂಚಾಕ್ಷರಿಯನ್ನು ಜಪಿಸುತ್ತ ಧ್ಯಾನದಲ್ಲಿ ಕುಳಿತನು. ಹಾಗಿರುವಾಗ ಒಂದು ಅಶರೀರವಾಣಿ ಹೀಗೆ ಮೊಳಗಿತು :

" ತಾರಕಾ ! ಚಿಂತಿಸಬೇಡ. ನಿನಗೆ ಮೋಕ್ಷವನ್ನು ಕೊಡುತ್ತೇನೆ ! " ಇದನ್ನು ಕೇಳಿ ಸಮಾಧಾನಗೊಂಡ ತಾರಕನು ಪೂಜೆಯನ್ನು ಮುಗಿಸಿ, ಶಿವಲಿಂಗವನ್ನು ಕಂಠದಲ್ಲಿ ಧರಿಸಿ, ಮತ್ತೆ ಯುದ್ಧಕ್ಕೆ ಬಂದನು.

ಕುಮಾರಸ್ವಾಮಿಗೂ ತಾರಕಾಸುರನಿಗೂ ಖಾಡಾಖಾಡೀ ಯುದ್ಧವು ಪ್ರಾರಂಭವಾಯಿತು. ಕುಮಾರಸ್ವಾಮಿ ಎಷ್ಟು ಅಸ್ತ್ರಗಳನ್ನು ಪ್ರಯೋಗಿಸಿದರೂ ತಾರಕನು ಸ್ವಲ್ಪವೂ ಚಲಿಸಲಿಲ್ಲ. ಅವನಿಗೆ ಇರುವೆ ಕಚ್ಚಿದಂತೆಯೂ ಅನಿಸಲಿಲ್ಲ. ಅವನ ಕೊರಳಿನಲ್ಲಿ ಈಶ್ವರನ ಲಿಂಗವಿರುವಾಗ ಅವನನ್ನು ಯಾವ ಅಸ್ತ್ರ ಶಸ್ತ್ರಗಳೂ ಏನೂ ಮಾಡಲಾರವೆಂದು ನಾರದನು ಬಂದು ಕುಮಾರಸ್ವಾಮಿಯೊಂದಿಗೆ ಹೇಳಿದನು.

ಈ ಮಾತನ್ನು ನೆನಪಿಟ್ಟುಕೊಂಡು ಕುಮಾರಸ್ವಾಮಿ ತಾರಕನ ಎದೆಯಲ್ಲಿರುವ ಶಿವಲಿಂಗವನ್ನು ಗುರಿಯಿಟ್ಟು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಆ ಲಿಂಗವು ಐದು ತುಂಡುಗಳಾಗಿ ಕೆಳಗೆ ಬಿತ್ತು. ಸೂರ್ಯನೂ ವಿಶ್ವಕರ್ಮನೂ ಕೂಡಲೇ ಕೆಳಗೆಬಿದ್ದ ಲಿಂಗದ ತುಂಡುಗಳನ್ನು ಹೆಕ್ಕಿ ತೆಗೆದುಕೊಂಡು ಹೋಗಿ ಐದು ಕಡೆಗಳಲ್ಲಿ ಪ್ರತಿಷ್ಠೆ ಮಾಡಿದರು. ಆ ಸ್ಥಳಗಳು ಪಂಚ ಭೀಮಲಿಂಗೇಶ್ವರಗಳೆಂದು ಪ್ರಸಿದ್ಧವಾದುವು.

ತಾರಕನ ಕೊರಳಿಗೆ ಕಟ್ಟಿಕೊಂಡಿದ್ದ ಶಿವಲಿಂಗವು ಯಾವಾಗ ಕೆಳಗೆಬಿದ್ದು ಒಡೆದುಹೋಯಿತೋ ಆಗಲೇ ಕುಮಾರಸ್ವಾಮಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ತಾರಕನನ್ನು ಸಂಹರಿಸಿಬಿಟ್ಟನು. ದೇವೀಗಣಗಳು ತಾರಕನ ಸೇನೆಗಳನ್ನು ಕೊಲ್ಲುತ್ತ, ಮಾಂಸಗಳನ್ನು ತಿಂದು ರಕ್ತವನ್ನು ಕುಡಿಯುತ್ತ ಬೀಭತ್ಸ ರೂಪಗಳಿಂದ ನೃತ್ಯಗಳನ್ನು ಮಾಡುತ್ತಿರಲು, ದೇವತೆಗಳು ಪುಷ್ಪವೃಷ್ಟಿ ಸುರಿಸಿದರು.

## ೮. ವಳ್ಳೀ ಕಲ್ಯಾಣ



ಯಾರಿಂದಲೂ ಕೊಲ್ಲಲಾಗದ ತಾರಕಾಸುರನನ್ನೂ, ಅವನೊಂದಿಗೆ ಸೇರಿದ ಅನೇಕ ಮಂದಿ ಇತರ ರಾಕ್ಷಸರನ್ನೂ ಸಂಹಾರ ಮಾಡಿದ ಮೇಲೆ ಕುಮಾರಸ್ವಾಮಿ ಸ್ವಲ್ಪಕಾಲ ಸ್ವರ್ಗದಲ್ಲಿಯೇ ಇದ್ದು, ಆಮೇಲೆ ಪಾರ್ವತೀ ಪರಮೇಶ್ವರರನ್ನು ಸೇವಿಸಬೇಕೆಂಬ ಆಲೋಚನೆಯಿಂದ ಕೈಲಾಸಕ್ಕೆ ಬಂದು ಅಲ್ಲಿಯೇ ಇದ್ದನು.

ಹಾಗಿರುವಾಗ ಒಂದು ದಿನ ಕುಮಾರಸ್ವಾಮಿ ತನ್ನ ಸ್ನೇಹಿತರೊಂದಿಗೆ ಕೂಡಿಕೊಂಡು ವನವಿಹಾರ ಮಾಡಲು ಹೊರಟನು. ಆಗ ನಾರದ ಮಹಾಮುನಿ ಅವನ ಬಳಿಗೆ ಬಂದನು. ಕುಮಾರಸ್ವಾಮಿ ನಾರದನಿಗೆ ವಂದಿಸಿ, ಅತಿಥಿ ಸತ್ಕಾರಗಳನ್ನು ಮಾಡಿ, "ಮುನೀಶ್ವರಾ! ಲೋಕಗಳಲ್ಲಿರುವ ವಿಶೇಷ ಸಮಾಚಾರಗಳೇನು?" ಎಂದು ಕೇಳಿದನು.

"ದೇವಸೇನಾಪತೀ! ನಿನ್ನ ದಯದಿಂದ ಎಲ್ಲಾ ಲೋಕಗಳವರೂ ಸುಖವಾಗಿದ್ದಾರೆ. ನೀನು ರಾಕ್ಷಸರನ್ನೆಲ್ಲ ಸಂಹಾರ ಮಾಡಿದುದರಿಂದ ಈಗ ಯಜ್ಞ ಯಾಗಾದಿ ಸಾತ್ವಿಕ ಕರ್ಮಗಳೆಲ್ಲ ಶುಭಸಾಂಗವಾಗಿ ಸಾಗುತ್ತಾ ಇವೆ. ನಾನೀಗ ನಿನಗೆ ಒಂದು ವಿಷಯವನ್ನು ಹೇಳಬೇಕೆಂತಲೇ ಬಂದಿದ್ದೇನೆ. ಇಲ್ಲಿಗೆ ಸಮೀಪದಲ್ಲಿ ಭಿಲ್ಲಪುರವೆಂಬ ಊರೊಂದಿದೆ. ಅಲ್ಲಿ ಪುಳಿಂದನೆಂಬ ಭಿಲ್ಲರ ರಾಜನಿದ್ದಾನೆ. ಅವನು ದೊಡ್ಡ ಈಶ್ವರ ಭಕ್ತ. ಅವನ ಹೆಂಡತಿಗೆ ಬಹಳ ಕಾಲದವರೆಗೆ ಮಕ್ಕಳಾಗಲಿಲ್ಲ. ಹೀಗಿರುವಾಗ ಆ ಭಿಲ್ಲರಾಜನಿಗೆ ವನದಲ್ಲಿ ಒಂದು ಹೆಣ್ಣು ಮಗು ದೊರಕಿತು. ಅವನು ಆ ಮಗುವನ್ನು ತಂದು ತನ್ನ ಹೆಂಡತಿಯ ಕೈಗೆ ಕೊಟ್ಟನು. ಆ ದಂಪತಿಗಳು ಆ ಮಗುವಿಗೆ ವಳ್ಳಿ ಎಂದು ಹೆಸರಿಟ್ಟು ಅತ್ಯಂತ ಅಕ್ಕರೆಯಿಂದ ಬೆಳೆಸಿದರು. ವಳ್ಳಿಯ ಅಂದಚೆಂದಗಳನ್ನು ವರ್ಣಿಸಲು ನನ್ನಿಂದ ಸಾಧ್ಯವಾಗದು. ಬಂಗಾರದ ಬೊಂಬೆ! ನೋಡಿದ ಕೂಡಲೇ ವನಲಕ್ಷ್ಮಿಯ ಹಾಗೆ ಕಾಣುತ್ತಾಳೆ. ಅವಳೇ ನಿನಗೆ ಪತ್ನಿಯಾಗುವಳೆಂದು ಬ್ರಹ್ಮನು ಮಾತಿನ ಸಂದರ್ಭದಲ್ಲಿ ನನ್ನೊಂದಿಗೆ ಹೇಳಿದನು. ಈಗ ಅವಳು ಯುಕ್ತವಯಸ್ಸಿಗೆ ಬಂದಿದ್ದಾಳೆ. ನೀನು ಅವಳನ್ನು ವರಿಸಿಕೊಂಡು ಸುಖಪಡುತ್ತ ಪ್ರಸಿದ್ಧನಾಗು" ಎಂದನು ನಾರದ.

ಅನಂತರ ನಾರದನು ಕುಮಾರಸ್ವಾಮಿಯಿಂದ ಅಪ್ಪಣೆ ಪಡೆದು ಭಿಲ್ಲ ರಾಜನಾದ ಪುಳಿಂದನ ಬಳಿಗೆ ಹೋದನು. ಪುಳಿಂದನು ಅವನನ್ನು ಗೌರವಿಸಿ ಕುಳ್ಳಿರಿಸಿದ ಮೇಲೆ, "ಮುನೀಂದ್ರರೇ, ಸರಿಯಾದ ಸಮಯಕ್ಕೆ ಬಂದಿರಿ. ನನ್ನ ಮಗಳು ವಳ್ಳಿಗೆ ತಕ್ಕ ಗುಣ ರೂಪಗಳಿರುವ ಗಂಡನು ಎಲ್ಲಿರುವನೆಂದು ಅಪ್ಪಣೆ ಕೊಡಿಸಬೇಕು" ಎಂದು ಕೇಳಿಕೊಂಡನು.

"ಹೌದು. ನಿನ್ನ ಮಗಳು ವಳ್ಳಿಯ ಸಂಗತಿ ಪೂರಾ ನನಗೆ ಗೊತ್ತಿದೆ. ಇವಳಿಗೆ ತಕ್ಕ ವರನೆಂದರೆ ಶಿವಪುತ್ರನಾದ ಕುಮಾರಸ್ವಾಮಿಯೇ ಸರಿ. ಅವನಿಗೆ




ಕೂಡಾ ವಳ್ಳಿಗಿಂತ ತಕ್ಕವಳು ಬೇರೆ ಯಾರೂ ದೊರಕರು. ಬೇಗದಲ್ಲೇ ಕುಮಾರಸ್ವಾಮಿ ವನ ವಿಹಾರಕ್ಕೆ ಬಂದು ವಳ್ಳಿಯನ್ನು ನೋಡಿ ಒಲಿಯುತ್ತಾನೆಂದು ನಂಬು. ನೀನೇನೂ ಹೆಚ್ಚಿನ ಪ್ರಯತ್ನ ಮಾಡಬೇಕಾಗಿಲ್ಲ. ಅವನಾಗಿಯೇ ನಿಮ್ಮ ಅಳಿಯನಾಗುತ್ತಾನೆ. ನೀವೆಲ್ಲಾ ಧನ್ಯರಾಗುವಿರಿ. ಶಿವನೇ ಸಂಬಂಧಿಕನಾಗುವುದಕ್ಕಿಂತ ಹೆಚ್ಚಿನ ಭಾಗ್ಯ ಬೇರೇನಿದೆ ? " ಎಂದು ಪುಳಿಂದನೊಂದಿಗೆ ಹೇಳಿ ನಾರದನು ತನ್ನ ದಾರಿ ಹಿಡಿದು ಹೊರಟುಹೋದನು.

ನಾರದನು ವಳ್ಳಿಯ ಸೌಂದರ್ಯವನ್ನು ಕುರಿತು ಹೇಳಿದ ಮಾತು ಕುಮಾರಸ್ವಾಮಿಯ ಮನಸ್ಸಿನಲ್ಲಿ ಸವಿಯಾದ ಅಲೆಗಳನ್ನು ಎಬ್ಬಿಸಲು ತೊಡಗಿತು. ಅವಳನ್ನು ಮದುವೆ ಮಾಡಿಕೊಳ್ಳಬೇಕೆಂಬ ಬಯಕೆ ಅವನ ಮನಸ್ಸಿನಲ್ಲಿ ತಲೆ ಎತ್ತಿತು. ಭಿಲ್ಲರ ಹುಡುಗಿಯನ್ನು ಮದುವೆಯಾಗುವೆನೆಂದರೆ ತಂದೆತಾಯಿಗಳು ಒಪ್ಪುವರೋ ಇಲ್ಲವೋ ಎಂಬ ಸಂದೇಹ ಬೇರೆ ಬಂತು. ತಾನು ಯಾವ ನಿರ್ಣಯ ಮಾಡಬೇಕಾದರೂ ಮೊದಲು ಅವಳನ್ನು ನೋಡಿಬಿಡುವುದು ಒಳ್ಳೆಯದೆಂದುಕೊಂಡನು. ಅದಕ್ಕಾಗಿ ಅವನು ತನ್ನ ಪರಿವಾರವನ್ನು ಕರೆದುಕೊಂಡು, ಭಿಲ್ಲಪುರದ ಸಮೀಪಕ್ಕೆ ಹೋಗಿ ಅಲ್ಲಿಯ ವನದಲ್ಲಿ ವಿಹರಿಸಲು ತೊಡಗಿದನು.

ನಾರದನ ಮಾತುಗಳು ಕುಮಾರಸ್ವಾಮಿಯನ್ನು ಚಂಚಲಗೊಳಿಸಿದಂತೆಯೇ, ವಳ್ಳಿಯನ್ನು ಕೂಡಾ ಚಂಚಲಗೊಳಿಸಿದ್ದಿತು. ಪುಳಿಂದನೊಂದಿಗೆ ನಾರದನು ಹೇಳಿದುದನ್ನೆಲ್ಲ ಮರೆಯಲ್ಲಿದ್ದು ಅವಳೂ ಕೇಳಿದ್ದಳು. ಕುಮಾರಸ್ವಾಮಿ ತಾನಾಗಿ ಬರುವನೆಂದಿದ್ದಾನಷ್ಟೆ ? ಅವನು ಯಾವಾಗ ಬರುತ್ತಾನೋ ಎಂಬ ಆತುರದಿಂದ ಅವಳ ಕಣ್ಣುಗಳು ಅತ್ತಿತ್ತ ಸುಳಿದುಕೊಂಡೇ ಇದ್ದುವು. ಅಷ್ಟೊಂದು ಮೇಲ್ಮಟ್ಟದವನು ತನ್ನಂತಹ ಕೀಳ್ಮಟ್ಟದವಳನ್ನು ವರಿಸಿಕೊಳ್ಳುತ್ತಾನೆಯೇ ಎಂದು ಅವಳಿಗೆ ಸಂದೇಹ. ತನ್ನ ತಾಯಿ ತಂದೆಯರು ತನ್ನನ್ನು ಬೆಳೆಸಿದವರೇ ಹೊರತು ಹಡೆದವರು ಅಲ್ಲವೆಂಬುದು ಅವಳಿಗೆ ಸಮಾಧಾನ ಕೊಡುತ್ತಿತ್ತು. ಒಂದು ವೇಳೆ ಕುಮಾರಸ್ವಾಮಿ ತನ್ನನ್ನು ಮದುವೆ ಮಾಡಿಕೊಳ್ಳದಿದ್ದರೆ, ತಾನು ಶರೀರತ್ಯಾಗ ಮಾಡುವುದೇ ಸರಿಯೆಂದು ನಿಶ್ಚಯಮಾಡಿಕೊಂಡಳು ವಳ್ಳಿ.

ಆ ದಿನ ಅವಳು ತನ್ನ ತಂದೆತಾಯಿಗಳೊಂದಿಗೆ ಏನೂ ಹೇಳದೆ, ಕೆಲವಂದಿ ಗೆಳತಿಯರನ್ನು ಕೂಡಿಕೊಂಡು ವನವಿಹಾರ ಮಾಡಲು ಹೊರಟಳು. ಸ್ವಲ್ಪಹೊತ್ತು ವಿಹರಿಸಿ ಒಂದು ಸಣ್ಣ ಮಾವಿನ ಮರದ ಬುಡದಲ್ಲಿ ಕುಳಿತಳು. ಆಗ ಕುಮಾರಸ್ವಾಮಿ ತನ್ನವರೊಂದಿಗೆ ಅಲ್ಲಿಗೇ ಬಂದು ಸ್ವಲ್ಪ ದೂರದಲ್ಲಿದ್ದ ಮತ್ತೊಂದು ಮರದ ಕೆಳಗೆ ಕುಳಿತುಕೊಂಡನು.

ಆಗ ವಳ್ಳಿಯ ಗೆಳತಿಯರಲ್ಲಿ ಒಬ್ಬಳು ಕುಮಾರಸ್ವಾಮಿಯ ಬಳಿಗೆ ಹೋಗಿ, " ಅಯ್ಯಾ, ನಮ್ಮ

ವನಕ್ಕೆ ಬಂದಿರುವ ನೀವು ಯಾರು ? ಎಲ್ಲಿಂದ ಬಂದಿದ್ದೀರಿ ? ಈ ಪುಷ್ಪವನವು ಪುಳಿಂದ ರಾಜ ಕುಮಾರಿಯಾದ ವಳ್ಳೀದೇವಿ ವಿಹರಿಸುವ ಸ್ಥಳ. ಈ ಪ್ರದೇಶಕ್ಕೆ ಗಂಡಸರಾರೂ ಬರಕೂಡದು. ನಿಮಗೆ ಗೊತ್ತಿಲ್ಲವೆಂದು ಕಾಣುತ್ತದೆ " ಎಂದಳು.




ಅವಳ ಮಾತು ಕೇಳುತ್ತಿದ್ದಂತೆ ಕುಮಾರ ಸ್ವಾಮಿಗೆ ಹೊಸ ಉತ್ಸಾಹವೆದ್ದಿತು. ಅವನು ಆ ಗೆಳತಿಯೊಂದಿಗೆ, " ನನ್ನ ಹೆಸರು ಕುಮಾರಸ್ವಾಮಿ. ನಾನು ಶಿವ ಪಾರ್ವತಿಯರ ಕುಮಾರ. ಸ್ವಂತ ಊರು ಕೈಲಾಸ. ನಿಮ್ಮ ವಳ್ಳಿಯ ಸಮಾಚಾರ ಕೇಳುವಂತಿದ್ದರೆ ಇನ್ನಿಷ್ಟು ಹೇಳು " ಎಂದನು.

" ಇದು ಭಿಲ್ಲರ ರಾಜ್ಯ. ರಾಜನಾದ ಪುಳಿಂದನು ಭಿಲ್ಲಪುರ ರಾಜಧಾನಿಯಲ್ಲಿದ್ದಾನೆ. ಅವನು ಈಶ್ವರ ಭಕ್ತನು. ಮಕ್ಕಳಿಲ್ಲದ ಅವನಿಗೆ ವನದಲ್ಲಿ ಸಿಕ್ಕಿದವಳು ವಳ್ಳಿ.. ಆದರೂ ಬಹು ಮುದ್ದಿನಿಂದ ಅವಳನ್ನು ಬೆಳೆಸಿದ್ದಾರೆ " ಎಂದಳು ಆ ಗೆಳತಿ.

" ಆ ನಿಮ್ಮ ವಳ್ಳಿಗೆ ಮದುವೆಯಾಯಿತೇನು ? " ಎಂದು ಕುಮಾರಸ್ವಾಮಿ ಕೇಳಿದನು.

" ಸಂಬಂಧವು ಗೊತ್ತಾಗಿದೆ. ಇನ್ನು ಮೇಲೆ ಮದುವೆಯಾಗಬೇಕು " ಎಂದಳು ಗೆಳತಿ.

ಕುಮಾರಸ್ವಾಮಿ ಉತ್ಸಾಹದಿಂದ, " ಅದೆಂತಹ ಸಂಬಂಧ ? ಯಾರೊಂದಿಗೆ ? ವರನು ಯಾರು ? " ಎಂದು ಕೇಳಿದನು.

" ನಿನ್ನೆ ನಮ್ಮ ರಾಜನ ಹತ್ತಿರ ನಾರದಮುನಿ ಬಂದಿದ್ದನು. ಶಿವನ ಕುಮಾರನಾದ ಕುಮಾರಸ್ವಾಮಿ ಬಂದು ನಮ್ಮ ವಳ್ಳಿಯನ್ನು ಮದುವೆ ಮಾಡಿ ಕೊಳ್ಳುತ್ತಾನೆಂದು ರಾಜನೊಂದಿಗೆ ಹೇಳಿ ಹೋದನು. ಅದನ್ನು ವಳ್ಳಿಯೂ ಕೇಳಿಸಿಕೊಂಡಳು. ಆಗಿನಿಂದ ನಮ್ಮ ವಳ್ಳಿ ಆ ಕುಮಾರಸ್ವಾಮಿಯನ್ನೇ ನೆನೆದು ಕೊಂಡು ಕಸಿವಿಸಿಯಾಗಿದ್ದಾಳೆ. ಈಗ ಅವಳಿಗೆ ಕ್ಷಣವು ಒಂದು ಯುಗದ ಹಾಗಾಗಿದೆ. ಅವಳ ಸಂಕಟ ನೋಡಲಾಗದೆ ನಾವು ಅವಳನ್ನು ವನ ವಿಹಾರಕ್ಕೆ ಕರೆದುಕೊಂಡು ಬಂದೆವು. ಈಗ ಅವಳು ಆ ಮಾವಿನ ಮರದ ಬುಡದಲ್ಲಿ ಕುಳಿತಿದ್ದಾಳೆ. ನೀನು ಇಲ್ಲಿಯೇ ಇರು. ನಾನು ಹೋಗಿ ವಳ್ಳಿಯನ್ನು ಕರೆದುಕೊಂಡು ಬರುತ್ತೇನೆ " ಎಂದು ಹೇಳಿ ಆ ಗೆಳತಿ ಹೋಗಿ ವಳ್ಳಿಯನ್ನು ಕೈಹಿಡಿದು ಎಳೆದು ಕೊಂಡೇ ಬಂದಳು.

ಕುಮಾರಸ್ವಾಮಿ ವಳ್ಳಿಯ ಕೈಯನ್ನು ತಾನು ಹಿಡಿದು, " ವಳ್ಳೀ, ನಾನೇ ಕುಮಾರಸ್ವಾಮಿ. ನಿನ್ನನ್ನು ಮದುವೆಯಾಗಲಿಕ್ಕೇ ಬಂದೆನು " ಎಂದನು.

ವಳ್ಳಿ ತಲೆ ತಗ್ಗಿಸಿಕೊಂಡು, " ನನ್ನನ್ನು ಮದುವೆ ಯಾಗಬೇಕಾದರೆ ನನ್ನ ತಾಯಿ ತಂದೆಯರ ಅನುಮತಿ ಪಡೆಯಬೇಕು. ಲೋಕನಿಂದೆ ಬರುವಂಥ ಕೆಲಸ ಮಾಡಬಾರದು. ಸ್ವಲ್ಪಹೊತ್ತು ಇಲ್ಲಿಯೇ ಇರಿ. ನಾನು ಹೋಗಿ ತಾಯಿ ತಂದೆಯರ ಅನುಮತಿ ಕೇಳಿ ಬರುತ್ತೇನೆ " ಎಂದು ವಳ್ಳಿ ತುಂಬಿದ ಆನಂದ

ದೊಂದಿಗೆ ತನ್ನ ಕೈಯನ್ನು ಬಿಡಿಸಿಕೊಂಡು ಗೆಳತಿಯರೊಂದಿಗೆ ಬೇಗ ಬೇಗನೆ ಮನೆಗೆ ಹೋದಳು.

ಅವಳಿಂದ ಪುಳಿಂದನು ನಡೆದ ಸಂಗತಿಯನ್ನು ತಿಳಿದು ಅತ್ಯಂತ ಸಂಭ್ರಮದಿಂದ ತನ್ನ ಪರಿವಾರದವರನ್ನೆಲ್ಲಾ ಕರೆದುಕೊಂಡು ಕುಮಾರಸ್ವಾಮಿಯ ಬಳಿಗೆ ಬಂದನು. ಆ ರಾತ್ರಿ ಬೆಳಗಾಗುವ ಹೊತ್ತಿನಲ್ಲಿ ಒಳ್ಳೆಯ ಮುಹೂರ್ತವಿರುವುದೆಂದು ಹೇಳಿ ಕುಮಾರಸ್ವಾಮಿಯನ್ನೂ, ಅವನ ಪರಿವಾರವನ್ನೂ ತನ್ನೊಂದಿಗೆ ಕರೆದುಕೊಂಡು ಹೋಗಿ, ಬಿಡದಿಯಲ್ಲಿ ಕೂಡಿಸಿ ಉಪಚರಿಸಿದನು. ಆಮೇಲೆ ಮಗಳ ಮದುವೆಯ ಏರ್ಪಾಡಿಗೂ ತೊಡಗಿದನು.

ಈ ವಾರ್ತೆ ಆಗಲೇ ಶಿವ ಪಾರ್ವತಿಯರಿಗೂ ತಿಳಿಸಲಾಯಿತು. ಶಿವನೂ ಪಾರ್ವತಿಯೂ ಸಮಯಕ್ಕೆ ಸರಿಯಾಗಿ ಕೈಲಾಸದಿಂದ ಬಂದು ಕುಮಾರಸ್ವಾಮಿಯ ವಿವಾಹವನ್ನು ನಡೆಯಿಸಿದರು. ಆಮೇಲೆ ಶಿವ ಪಾರ್ವತಿಯರು ನೂತನ ವಧೂವರರನ್ನು ಕರೆದುಕೊಂಡು ಕೈಲಾಸಕ್ಕೆ ಹಿಂದಿರುಗಿದರು.

ಮುಂದೆ ಕಾಲವು ಕ್ರಮಿಸುತ್ತಿರಲು ಶೋಣಿತಪುರದಲ್ಲಿ ಗಜಾಸುರನೆಂಬವನು ಅವತರಿಸಿದನು. ಅವನು ಕೂಡಾ ಬ್ರಹ್ಮನನ್ನು ಧ್ಯಾನಿಸಿ ಘೋರವಾದ ತಪಸ್ಸು ಮಾಡಿ ಅನೇಕ ವರಗಳನ್ನು ಪಡೆದು ಉನ್ಮತ್ತತೆಯಿಂದ ಬೀಗಿದನು. ತನ್ನ ಬಲದಿಂದ ಮೂರು ಲೋಕಗಳನ್ನೂ ಗೆದ್ದು ತಾನೇ ಆಳಲಿಕ್ಕೂ ತೊಡಗಿದನು. ಪರಮ ಶಿವಭಕ್ತನಾದ ಗಜಾಸುರನ ಪಾಲನೆಯಲ್ಲಿ ಪ್ರಪಂಚದವರೆಲ್ಲಾ ಎಲ್ಲಾ ಸುಖಗಳನ್ನೂ ಅನುಭವಿಸುತ್ತಿದ್ದರು. ಪ್ರಜೆಗಳಿಗೆ ಯಾವ ಈತಿಬಾಧೆಗಳೂ ಇರಲಿಲ್ಲ.

ಒಂದು ದಿನ ನಾರದನು ಗಜಾಸುರನ ಬಳಿಗೆ ಹೋಗಿ, ಅವನಿಂದ ಅತಿಥಿ ಮರ್ಯಾದೆಗಳನ್ನು ಪಡೆದ ಮೇಲೆ, "ಗಜಾ ! ನೀನು ದೊಡ್ಡ ಈಶ್ವರ ಭಕ್ತನು. ಶಿವನನ್ನು ನಿನ್ನ ಹೃದಯದೊಳಗೇ ಇರಬೇಕೆಂದು ಕೇಳಬಾರದೇನು ? " ಎಂದನು.

ಈ ಮಾತು ಗಜಾಸುರನಿಗೆ ತುಂಬಾ ಪ್ರಿಯವಾಯಿತು. ಅವನು ತನ್ನ ಪೂಜೆಯಿಂದ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡು ತನ್ನ ಹೃದಯದೊಳಗೇ ಇರಬೇಕೆಂದು ವರ ಕೇಳಿದನು. ಶಿವನು ಅದಕ್ಕೆ ಸಮ್ಮತಿಸಿ, ಗಜಾಸುರನ ಹೃದಯದೊಳಗೇ ಇದ್ದು, ಅವನ ಮಾನಸಿಕ ಪೂಜೆಗಳನ್ನು ಸ್ವೀಕರಿಸಿಕೊಳ್ಳ ತೊಡಗಿದನು.

ಶಿವನು ಎಲ್ಲಿ ಹೋದನೋ ಏನಾದನೋ ಎಂದು ಪಾರ್ವತಿಗೆ ತಿಳಿಯಲಿಲ್ಲ. ಅವಳು ರುದ್ರ ಗಣಗಳಿಂದ ಲೋಕಗಳಲ್ಲೆಲ್ಲಾ ಹುಡುಕಾಡಿಸಿದಳು. ಕಡೆಗೆ ಶಿವನು ಲಿಂಗರೂಪದಲ್ಲಿ ಗಜಾಸುರನ ಹೃದಯದೊಳಗೆ ಇರುವನೆಂಬ ಸಂಗತಿ ಅವಳಿಗೆ ತಿಳಿಯಿತು.



# ವೃತ್ತಿಧರ್ಮ

ಕೃಷ್ಣಾಪುರದಲ್ಲಿರುವ ಭದ್ರಯ್ಯನೆಂಬವನು ಒಳ್ಳೆಯ ಹೆಸರು ಪಡೆದ ಜ್ಯೋತಿಷ್ಯನು.

ಅವನು ಕೈ ನೋಡಿ ಭವಿಷ್ಯತ್ತು ಹೇಳುವನು. ಅಂಜನ ಹಾಕಿ ಹೋದ ವಸ್ತುಗಳು ಎಲ್ಲಿವೆ ಎಂಬುದನ್ನು ಕೂಡಾ ಹೇಳುವನು.

ಒಂದು ದಿನ ಅವನು ಏನೋ ಕೆಲಸದ ಮೇಲೆ ಹೊರಗಿನ ಊರಿಗೆ ಹೋಗಿ ತಿರುಗಿ ಬರುವಾಗ, ನಡು ಮಧ್ಯಾಹ್ನದ ಬಿಸಿಲಿಗೆ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು, ದಾರಿಯ ಪಕ್ಕದಲ್ಲಿದ್ದ ಛತ್ರದ ಜಗಲಿಯಲ್ಲಿ ಕೊಡೆಯನ್ನು ಹತ್ತಿರವಿಟ್ಟುಕೊಂಡು ಕುಳಿತನು.

ಸ್ವಲ್ಪ ಹೊತ್ತಿಗೆ ತೂಕಡಿಕೆ ಬಂದು, ಅಲ್ಲೇ ಮಲಗಿ ಹಾಗೆಯೇ ನಿದ್ದೆ ಮಾಡಿದನು. ಎಚ್ಚರಿಕೆಯಾದಾಗ ಅವನ ಹತ್ತಿರವಿದ್ದ ಕೊಡೆ ಕಾಣಿಸಲಿಲ್ಲ.

ಭದ್ರಯ್ಯ ಗ್ರಾಮಾಧಿಕಾರಿಯ ಬಳಿಗೆ ಹೋಗಿ ಕೊಡೆ ಕಳವಾಯಿತೆಂದು ಫಿರ್ಯಾದಿ ಮಾಡಿದನು.

"ನಿಮ್ಮಂತಹ ದೊಡ್ಡ ಜೋಯಿಸರಿಗೆ ಇದೊಂದು ಪ್ರಶ್ನೆಯೆ ? ಕೊಡೆ ಎಲ್ಲಿದೆ ಎಂದು ತಿಳಿಯುವುದು ನಿಮಗೇನೂ ಕಷ್ಟವಿಲ್ಲವಷ್ಟೆ ? ಅಂಜನ ಹಾಕಿ ನೋಡಿರಿ. ಕಳ್ಳನನ್ನು ನೋಡಿ ಹೇಳಿರಿ. ನಾನು ಶಿಕ್ಷಿಸುತ್ತೇನೆ" ಎಂದನು ಗ್ರಾಮಾಧಿಕಾರಿ ಮುಗುಳು ನಗುತ್ತ.

"ಹಾಗೇ ಮಾಡುತ್ತಿದ್ದೆ. ಆದರೆ ನಾನು ಅಂಜನ ಹಾಕಲಿಕ್ಕೆ ಎರಡು ರೂಪಾಯಿ ತೆಗೆದುಕೊಳ್ಳುತ್ತೇನೆ. ನೀವು ಆ ಎರಡು ರೂಪಾಯಿ ಕೊಡುವುದಾದರೆ ಈಗಲೇ ಅಂಜನ ಹಾಕುತ್ತೇನೆ" ಎಂದನು ಭದ್ರಯ್ಯ ಜೋಯಿಸ !

ಗ್ರಾಮಾಧಿಕಾರಿಯ ಬಾಯಿ ತೆರದ ಹಾಗೇ ಸ್ತಬ್ಧ !







# ಪುಣ್ಯಕ್ಕೆ ಹೋದರೆ

ಕೋಣಾವರವೆಂಬ ಒಂದು ಗ್ರಾಮದಲ್ಲಿ ಕೋಟಪ್ಪನೆಂಬೊಬ್ಬ ಬಡವನಿದ್ದನು. ಅವನಿಗೆ ಗ್ರಾಮಾಧಿಕಾರಿಯಿಂದ ಮುಖ್ಯವಾದೊಂದು ಕೆಲಸ ಆಗಬೇಕಾಯಿತು. ಅವನು ಗ್ರಾಮಾಧಿಕಾರಿಯ ಬಳಿಗೆ ಹೋಗಿ ತನಗೆ ಬಂದ ಕಷ್ಟಗಳನ್ನು ಹೇಳಿಕೊಂಡು ಸಹಾಯಮಾಡಬೇಕೆಂದು ಕೇಳಿದನು. ಸಾಧಾರಣವಾಗಿ ಗ್ರಾಮಾಧಿಕಾರಿ ಯಾರಿಗೂ ಸಹಾಯ ಮಾಡುವವನಲ್ಲ. ಆ ದಿನ ಅವನ ಮನಸ್ಸಿನಲ್ಲಿ ಏನು ತೋರಿತೋ? ಅಲ್ಲ ಕೋಟಪ್ಪನ ಅದೃಷ್ಟವೋ! ಗ್ರಾಮಾಧಿಕಾರಿ ಕೋಟಪ್ಪನ ಕಷ್ಟಗಳು ಬಿಟ್ಟು ಹೋಗುವಂತೆ ಉಪಾಯ ಹೇಳಿ ಪಾರುಮಾಡಿದನು. ಕೋಟಪ್ಪ ಗ್ರಾಮಾಧಿಕಾರಿ ಹೇಳಿದ ಹಾಗೆಯೇ ಮಾಡಿ ಒಳ್ಳೆಯ ಪ್ರಯೋಜನ ಪಡೆದನು.

ಕೋಟಪ್ಪ ಬಡವನೇ ಆದರೂ ತನಗೆ ಸಹಾಯ ಮಾಡಿದ ಗ್ರಾಮಾಧಿಕಾರಿಗೆ ಏನಾದರೂ ಕಾಣಿಕೆ ಕೊಡಬೇಕೆಂದುಕೊಂಡು, ಏನು ಕೊಡುವುದೆಂದು ತಿಳಿಯದೆ ನಾಲ್ಕು ಮಂದಿಗಳೊಂದಿಗೆ ತಾನು ಏನು ಕೊಟ್ಟರೆ ಒಳ್ಳೆಯದೆಂದು ಸಲಹೆ ಕೇಳಿದನು.

"ನೀನೇನು ಕಾಣಿಕೆ ಕೊಡುವುದಪ್ಪಾ, ಕೋಟಪ್ಪಾ? ಹಾಗೆ ಕೊಡಬೇಕೆಂದುಕೊಂಡರೆ ಅವನಿಗೆ ಸ್ವಲ್ಪ ನಿನ್ನ ಕೈಯಿಂದಾದ ಸಾಸಿವೆ ಉಪ್ಪಿನಕಾಯಿ ಕೊಡು. ಗ್ರಾಮಾಧಿಕಾರಿಗೆ ಸಾಸಿವೆ ಉಪ್ಪಿನಕಾಯಿ ಮೇಲೆ ಬಹಳ ಇಷ್ಟ.

ಸಾಸಿವೆ ಉಪ್ಪಿನಕಾಯಿ ಹಾಕುವುದರಲ್ಲಿ ಕೋಟಪ್ಪನದು ಎತ್ತಿದ ಕೈ. ಅದರಲ್ಲಿ ಅವನಿಗೆ ಒಳ್ಳೇ ಹೆಸರಿತ್ತು. ಆ ಊರಿನ ಸಾವುಕಾರನು ಮಾವಿನಕಾಯಿಯ ಕಾಲದಲ್ಲಿ ಬಗೆಬಗೆಯ ಉಪ್ಪಿನ ಕಾಯಿಗಳನ್ನು ತಯಾರಿಸಿ ಪಟ್ಟಣದಲ್ಲಿ ಮಾರುತ್ತಾನೆ. ಹಾಗೆ ಉಪ್ಪಿನಕಾಯಿ ಹಾಕಿಸಲು ಸಾವುಕಾರನು ಕೋಟಪ್ಪನ ಸಹಾಯ ತೆಗೆದುಕೊಳ್ಳುತ್ತಾನೆ. ಕೋಟಪ್ಪನಿಗೆ ಕೂಲಿ ಕೊಡುವುದಕ್ಕೆ ಬದಲು ಸ್ವಲ್ಪ ಸಾಸಿವೆ ಉಪ್ಪಿನ ಕಾಯಿಯನ್ನೇ ಕೊಡುತ್ತಾನೆ ಸಾವುಕಾರ. ಕೋಟಪ್ಪ ಅದನ್ನು ಊರೊಳಗೆ ಬೇಕಾದವರಿಗೆ ಮಾರಿ ಹಣ ಮಾಡಿಕೊಳ್ಳುತ್ತಾನೆ.

ಕೋಟಪ್ಪನು ಸ್ವಲ್ಪ ಆಲೋಚನೆಮಾಡಿ ತನ್ನ ಹತ್ತಿರವಿದ್ದ ಸಾಸಿವೆ ಉಪ್ಪಿನಕಾಯಿಯಿಂದ ಸ್ವಲ್ಪ

"ವಸುಂಧರ"



ತೆಗೆದುಕೊಂಡು ಹೋಗಿ ಬಹು ವಿನಯದಿಂದ ಗ್ರಾಮಾಧಿಕಾರಿಗೆ ಕಾಣಿಕೆಯಾಗಿ ಕೊಟ್ಟನು.

ಗ್ರಾಮಾಧಿಕಾರಿ ಕೋಟಪ್ಪ ಕೊಟ್ಟ ಉಪ್ಪಿನಕಾಯಿಯನ್ನು ತಾಯಿಗೆ ತೋರಿಸಿ, "ಅಮ್ಮಾ, ಕೋಟಪ್ಪ ನನ್ನಿಂದ ಉಪಕಾರ ಹೊಂದಿದುದಕ್ಕೆ ಈ ಉಪ್ಪಿನಕಾಯಿ ತಂದು ಕೊಟ್ಟಿದ್ದಾನೆ. ಯಾರು ಏನು ಕೊಟ್ಟರೂ ತೆಗೆದುಕೊಳ್ಳಬೇಕೆಂದು ನೀನು ಹೇಳಿದ್ದರಿಂದಲೇ ನಾನು ಇದನ್ನು ತೆಗೆದುಕೊಂಡೆನು. ಅವನ ಉಪ್ಪಿನಕಾಯಿಗೆ ಒಳ್ಳೆಯ ಹೆಸರಿದೆ. ನಾವೆಲ್ಲಾ ಅವನ ಉಪ್ಪಿನಕಾಯಿಯ ರುಚಿ ನೋಡಬಹುದು. ಈವರೆಗೆ ನೋಡಿಲ್ಲವಷ್ಟೆ?" ಎಂದನು.

ಗ್ರಾಮಾಧಿಕಾರಿಯ ತಾಯಿಗೆ ತನ್ನ ಉಪ್ಪಿನಕಾಯಿಗೆ ಸಮಾನ ಯಾವುದೂ ಇಲ್ಲವೆಂಬ ಭಾವನೆಯಿತ್ತು. ಅಂತಲೇ ಅವಳು ಅದರ ವಾಸನೆ ನೋಡಿ ಮೋರೆ ಚಿರುಟಿಸಿ, "ಏನು ಘಾಟು! ಇದು ವ್ಯಾಪಾರದ ದೃಷ್ಟಿಯಿಂದ ಮಾಡಿದ್ದು. ಮನೆಯವರೆಲ್ಲಾ ತಿಂದರೆ ಹೊಟ್ಟೆ ಕೆಟ್ಟೀತು. ಬೇಕಾದರೆ ನೀನೊಬ್ಬನೇ ಜಾಗ್ರತೆಯಾಗಿ ರುಚಿ ನೋಡಿಕೋ" ಎಂದಳು.

ಗ್ರಾಮಾಧಿಕಾರಿ ಆ ದಿನವೇ ಕೋಟಪ್ಪನ ಉಪ್ಪಿನಕಾಯಿಯ ರುಚಿ ನೋಡಿದನು. ಅದರ ರುಚಿ ಅದ್ಭುತವಾಗಿತ್ತು. ಬೇರೆ ಪದಾರ್ಥಗಳನ್ನು ಬಿಟ್ಟು ಎರಡು ದಿನಗಳವರೆಗೆ ಕೋಟಪ್ಪನ ಉಪ್ಪಿನಕಾಯಿಯನ್ನೇ ಬಳಸಿ ಊಟ ಮಾಡಿದನು. ಅದರಿಂದ ಅವನಿಗೆ ಅಜೀರ್ಣವೂ, ಹೊಟ್ಟೇನೋವೂ, ಉರಿಯೂ ಹಿಡಿದುಕೊಂಡಿತು. ಹಾಸಿಗೆಯಲ್ಲೇ ಬಿದ್ದಿರಬೇಕಾಯಿತು. ಅವನ ತಾಯಿ ವೈದ್ಯನನ್ನು ಕರೆಯಿಸಿದಳು.

ವೈದ್ಯನು ಬಂದು ಗ್ರಾಮಾಧಿಕಾರಿಯನ್ನು ಪರೀಕ್ಷಿಸಿ, "ತಮ್ಮ ಆರೋಗ್ಯ ಬಹಳ ಕೆಟ್ಟಿದೆ. ಈಗಲೇ ರಜತಭಸ್ಮ ಬೇಕು, ಅದಕ್ಕೆ ಹತ್ತು ವರಹ ಬೇಕು. ಈಗಲೇ ಕೊಟ್ಟರೆ ತಯಾರಿಸಿ ತರುತ್ತೇನೆ. ತಡಮಾಡಿದರೆ ವಿಷಮಿಸುತ್ತದೆ" ಎಂದನು.

ಉಪಾಯವಿಲ್ಲದೆ ಗ್ರಾಮಾಧಿಕಾರಿ ವೈದ್ಯನಿಗೆ ಹತ್ತು ವರಹ ಕೊಟ್ಟನು. ವೈದ್ಯನು ಕೊಟ್ಟ ಮದ್ದಿನಿಂದ ಅವನ ರೋಗ ಎರಡು ದಿನಗಳಲ್ಲಿ ವಾಸಿಯಾಯಿತು. ಮತ್ತೆ ಎಂದಿನಂತೆ ಆರೋಗ್ಯಶಾಲಿಯಾದನು.

ಗ್ರಾಮಾಧಿಕಾರಿಯ ಬುದ್ಧಿ ಬಹುದೊಡ್ಡ ಜಿಪುಣತನದ್ದು. ಕೋಟಪ್ಪನ ಉಪ್ಪಿನಕಾಯಿಯಿಂದಾಗಿ ಅತ್ತ ಹಣವೂ ಹೋಗಿ, ಇತ್ತ ಆರೋಗ್ಯವೂ ಹಾಳಾಯಿತೆಂದುಕೊಂಡು ಸಂಕಟಪಡತೊಡಗಿದನು.

ಒಂದು ದಿನ ಅವನು ವೈದ್ಯನನ್ನು ತನ್ನ ಬಳಿಗೆ ಕರೆಯಿಸಿ, "ನನ್ನ ರೋಗಕ್ಕೆ ಚಿಕಿತ್ಸೆ ಮಾಡಲು ನೀವು ಹತ್ತು ವರಹ ತೆಗೆದುಕೊಂಡಿದ್ದೀರಿ. ಅದೇನೋ ಸರಿಯೆ. ಎಲ್ಲರೊಂದಿಗೂ ನೀವು ಐವತ್ತು ವರಹ ತೆಗೆದುಕೊಂಡೆನೆಂದೇ ಹೇಳಬೇಕು.



ಹಾಗೆ ಹೇಳದೆಹೋದರೆ ಈ ಗ್ರಾಮದಲ್ಲಿ ಅನೇಕ ಕಷ್ಟಗಳಿಗೆ ಗುರಿಯಾಗುವಿರಿ " ಎಂದು ಹೆದರಿಸಿದನು.

ಅನಾರೋಗ್ಯವಾಗಿರುವಾಗ ಗ್ರಾಮಾಧಿಕಾರಿ ವೈದ್ಯನಿಗೆ ಹೆದರುತ್ತಾನೆ. ಈಗ ಆರೋಗ್ಯದಲ್ಲಿರುವ ಗ್ರಾಮಾಧಿಕಾರಿ ಎಂದರೆ ವೈದ್ಯನಿಗೆ ಭಯ !

ಆದುದರಿಂದ ವೈದ್ಯನು ಕೂಡಲೇ ಗ್ರಾಮಾಧಿಕಾರಿಯೊಂದಿಗೆ, " ನೀವು ಹೇಳಿದ ಹಾಗೇ ಹೇಳುತ್ತೇನೆ. ಅದರಿಂದ ನನಗೇನು ನಷ್ಟವಿದೆ ? ಅದನ್ನು ಕೇಳಿ ಎಲ್ಲರೂ ನಿಮ್ಮ ಹಾಗೆಯೇ ನನಗೆ ಹೆಚ್ಚು ಹಣ ಕೊಡುವ ಸಾಧ್ಯತೆಯುಂಟು " ಎಂದು ಹೇಳಿ ಹೊರಟುಹೋದನು.

ಆಮೇಲೆ ಗ್ರಾಮಾಧಿಕಾರಿ ಕೋಟಪ್ಪನನ್ನು ಬರಮಾಡಿಸಿ, " ಲೋ ಕೋಟಪ್ಪ ! ನೀನು ಕೊಟ್ಟ ಸಾಸಿವೆ ಉಪ್ಪಿನಕಾಯಿ ತಿಂದದ್ದರಿಂದ ನನಗೆ ರೋಗ ಬಂತು. ಚಿಕಿತ್ಸೆಗಾಗಿ ವೈದ್ಯರಿಗೆ ಐವತ್ತು ವರಹ ಕೊಡಬೇಕಾಯಿತು. ಆ ಐವತ್ತು ವರಹಗಳನ್ನು ನೀನೇ ನನಗೆ ಕೊಡಬೇಕು " ಎಂದನು. ಅದನ್ನು ಕೇಳಿ, ಕೋಟಪ್ಪ ಗಾಬರಿಯಿಂದ ಬೆಪ್ಪಾಗಿ, " ಅಯ್ಯಾ ! ನಾನು ಬಡವ. ಅಷ್ಟು ಹಣ ಎಲ್ಲಿಂದ ತಂದೇನು ? ಹೇಗೆ ತಂದೇನು ? " ಎಂದನು.

" ಅದು ಹೇಗೆ ತರುವಿಯೋ ನಾಕಾಣೆ. ನಾನು ಕೇಳಿದ್ದರಲ್ಲಿ ನ್ಯಾಯವಿದೆ. ಅಷ್ಟು ಹಣ ನನಗೆ ತಂದುಕೊಡದೆ ಹೋದರೆ ನೀನು ತಕ್ಕ ಶಿಕ್ಷೆ ಅನುಭವಿಸಬೇಕಾಗಿ ಬರುತ್ತದೆ " ಎಂದನು ಗ್ರಾಮಾಧಿಕಾರಿ ಕೋಪದಿಂದ.

ಕೋಟಪ್ಪ ಮತ್ತೇನೂ ಮಾತಾಡಲು ತೋರದೆ, ಅಲ್ಲಿಂದ ಎದ್ದು ನೆಟ್ಟಗೆ ವೈದ್ಯನ ಬಳಿಗೆ ಹೋಗಿ, " ಒಯ್ ! ನಿಮ್ಮಿಂದಾಗಿ ನನಗೆ ಹೇಗೂ ಶಿಕ್ಷೆ ತಪ್ಪದು. ಆದ್ದರಿಂದ ತಪ್ಪುಮಾಡಿಯೇ ಶಿಕ್ಷೆ ಅನುಭವಿಸುತ್ತೇನೆ. ಆ ತಪ್ಪು ಏನೆಂದರೆ ನಿಮ್ಮನ್ನು ಕೊಂದುಬಿಡುತ್ತೇನೆ " ಎಂದನು ಮಹಾರೋಷದಿಂದ.

" ನನ್ನನ್ನು ಕೊಲ್ಲುವುದೇ ? ನಾನು ನಿನಗೇನು ಅನ್ಯಾಯ ಮಾಡಿದ್ದೇನೆ ? " ಎಂದನು ವೈದ್ಯ ಹೆದರಿ ನಡುಗುವ ಸ್ವರದಿಂದ.

" ನೀವು ಸಾಧಾರಣ ಅಜೀರ್ಣ ಹೋಗದ ಚಿಕಿತ್ಸೆಗೆ ಐವತ್ತು ವರಹ ತೆಗೆದುಕೊಂಡಿದ್ದೀರಿ. ಗ್ರಾಮಾಧಿಕಾರಿ ಆ ಹಣ ನಾನು ಕೊಡಬೇಕು ಅನ್ನುತ್ತಾನೆ, ಪುಣ್ಯಕ್ಕೆ ನಾನೊಂದಿಷ್ಟು ಉಪ್ಪಿನ ಕಾಯಿ ಕೊಟ್ಟದ್ದಕ್ಕೆ. ಅಲ್ಪಸ್ವಲ್ಪವಾದರೆ ಹೇಗಾದರೂ ತಂದುಕೊಡುತ್ತಿದ್ದೆ. ಐವತ್ತು ವರಹ ನಾನೆಲ್ಲಿಂದ ತರಲಿ ? " ಎಂದು ಕೋಟಪ್ಪ ನಡೆದ ಸಂಗತಿಯನ್ನೆಲ್ಲಾ ವೈದ್ಯನೊಂದಿಗೆ ಹೇಳಿದನು.

ಅದನ್ನೆಲ್ಲ ಕೇಳಿ ವೈದ್ಯನು, " ಓಹೋ ! ಹಾಗೇನು ಸಂಗತಿ ! ನಿನ್ನಂತಹ ಬಡವನಿಗೆ ಇಂಥಾ ಅನ್ಯಾಯಕ್ಕೆ ತಲೆಹಾಕಿದ ಗ್ರಾಮಾಧಿಕಾರಿಗೆ ತಕ್ಕ ಬುದ್ಧಿ ಕಲಿಸಲೇಬೇಕು " ಎಂದು ಕೋಟಪ್ಪನೊಂದಿಗೆ ರಹಸ್ಯವಾಗಿ ಏನೋ ಹೇಳಿದನು.



ಅದನ್ನು ಕೇಳಿ ಕೋಟಪ್ಪನು ವೈದ್ಯನ ಕಾಲು ಹಿಡಿದು, "ನೀವು ಬಹಳ ಒಳ್ಳೆಯವರು ಸ್ವಾಮಿ ! ಅನಾವಶ್ಯಕವಾಗಿ ನಿಮ್ಮನ್ನು ಹೊಡೆಯಲಿಕ್ಕೆ ಬಂದೆನು. ಕ್ಷಮಿಸಿರಿ ಸ್ವಾಮಿ!" ಎಂದನು.

ಆಮೇಲೆ ಕೋಟಪ್ಪನು ವೈದ್ಯನನ್ನೂ, ಬೇರೆ ಕೆಲವು ಗ್ರಾಮದ ಪ್ರಮುಖರನ್ನೂ ಕರೆದುಕೊಂಡು ಗ್ರಾಮಾಧಿಕಾರಿಯ ಮನೆಗೆ ಹೋದನು.

ಅಲ್ಲಿ ಕೋಟಪ್ಪ ಎಲ್ಲರೊಂದಿಗೆ ನಡೆದ ಸಂಗತಿಯನ್ನು ಹೇಳಿ, ತನಗೆ ನ್ಯಾಯದಾನ ಮಾಡಬೇಕೆಂದು ಕೇಳಿಕೊಂಡನು.

ಗ್ರಾಮದಲ್ಲಿಯ ಎಲ್ಲರಿಗೂ ಗ್ರಾಮಾಧಿಕಾರಿಯೊಂದಿಗೆ ಏನೋ ಒಂದು ಅಗತ್ಯ ಕೆಲಸವಿರುತ್ತಿತ್ತು. ಆ ಕಾರಣದಿಂದ ಎಲ್ಲರೂ ಕೋಟಪ್ಪನೊಂದಿಗೆ, "ನಿನ್ನ ಕಾರಣದಿಂದಲೇ ಅವರಿಗೆ ರೋಗ ಬಂದಿದೆ. ಆದ್ದರಿಂದ ವೈದ್ಯರಿಗೆ ಆದ ಖರ್ಚು ನೀನು ಕೊಡಬೇಕಾದ್ದೇ ಸರಿ. ಇದರಲ್ಲಿ ಅನ್ಯಾಯವೇನಿಲ್ಲ" ಎಂದರು.

ಆಗ ಕೋಟಪ್ಪ ಗ್ರಾಮಾಧಿಕಾರಿಯನ್ನು ನೋಡಿ, "ಅಯ್ಯಾ, ನಾನು ಅಷ್ಟು ಹಣ ಕೊಡಲೇಬೇಕೇನು ? ನನ್ನಂಥ ಬಡವನ ಮೇಲೆ ನಿಮ್ಮ ಮನಸ್ಸು ಕರಗುವುದೇ ಇಲ್ಲವೇನು ?" ಎಂದನು.

"ತಪ್ಪು ಮಾಡಿದವರನ್ನೆಲ್ಲಾ ನೋಡಿ ಮನಸ್ಸು ಕರಗಿಸಿಕೊಂಡರೆ ನಾನು ಗ್ರಾಮಾಧಿಕಾರಿಯಾಗಿರಲು ಸಾಧ್ಯವೇ ಇಲ್ಲ. ನೀನು ಅಷ್ಟು ಹಣ ಕೊಟ್ಟು ತೀರಲೇಬೇಕು" ಎಂದನು ಗ್ರಾಮಾಧಿಕಾರಿ.

ಆ ಮಾತು ಕೇಳಿದ ಕೂಡಲೇ ಕೋಟಪ್ಪ, ಒಮ್ಮೆಗೇ ವಿಕಾರಮುಖಮಾಡಿ ಎದೆ ಹಿಡಿದುಕೊಂಡು ನಡುಗುತ್ತಾ ಕೆಟ್ಟದನಿಯಿಂದ ಕೂಗಿ ನೆಲದಲ್ಲಿ ಬಿದ್ದನು. ಎಲ್ಲರೂ ಗಾಬರಿಯಾದರು.

ವೈದ್ಯನು ಕೋಟಪ್ಪನನ್ನು ಪರೀಕ್ಷೆಮಾಡಿ, "ಇವನಿಗೆ ರಕ್ತದ ಒತ್ತಡ ಬಂದಿದೆ. ಯಾರಿಗಾದರೂ ತಾಳಲಾಗದ ಕಷ್ಟವೂ, ಆವೇಶವೂ ಬಂದು ಮನಸ್ಸಿಗೆ ಪೆಟ್ಟಾದರೆ ಹೀಗಾಗಿ ಬಿಡುತ್ತದೆ. ಪಾಪ, ಇಂಥಾ ಬಡವನಿಗೆ ಇಂಥಾ ರೋಗ ಬರಬಾರದು. ಇದರ ಚಿಕಿತ್ಸೆಗೆ ಸ್ವರ್ಣಭಸ್ಮ ಬೇಕು. ಕಡೇಪಕ್ಷ ನೂರು ವರಹ ಖರ್ಚಾಗುತ್ತದೆ. ಯಾರು ಕೊಡುತ್ತಾರೆ ?" ಎಂದನು.

ಆಗ ಅಲ್ಲಿ ಸೇರಿದ ಗ್ರಾಮ ಪ್ರಮುಖರೆಲ್ಲಾ ಒಬ್ಬರನ್ನೊಬ್ಬರು ನೋಡಿಕೊಂಡರು. "ಇಂತಹ ಸಂದರ್ಭದಲ್ಲಿ ನಡೆಯಬೇಕಾದ ನ್ಯಾಯವೇನೆಂದು, ಇದೀಗ ನಮ್ಮ ಗ್ರಾಮಾಧಿಕಾರಿಯವರೇ ಹೇಳಿದ್ದಾರಷ್ಟೆ ? ಅವರ ಕಾರಣದಿಂದಲೇ ಕೋಟಪ್ಪನಿಗೆ ರಕ್ತದ ಒತ್ತಡ ಬಂದುದರಿಂದ ಚಿಕಿತ್ಸೆಗೆ ಬೇಕಾದ ಖರ್ಚನ್ನು ಅವರೇ ಕೊಡುತ್ತಾರೆ" ಎಂದರು.

ಗ್ರಾಮಾಧಿಕಾರಿಗೆ ಹಸೀ ಬೇವಿನಕಾಯಿ ಗಂಟಲಲ್ಲಿ ಸಿಕ್ಕಿಕೊಂಡಂತಾಯಿತು. ಇದೆಲ್ಲ ಕೋಟಪ್ಪನದೇ ತಂತ್ರವೆಂದು ಅವನಿಗೆ ಗೊತ್ತಾಯಿತು. ಇದಕ್ಕೆ

ವೈದ್ಯನ ಸಹಕಾರವೂ ಇದೆ ಎಂಬ ಅನುಮಾನವೂ ಅವನಿಗಾಯಿತು. ಆದರೆ ಬಾಯಿಬಿಟ್ಟು ಹೇಳುವಂತಿಲ್ಲ.

ಆದುದರಿಂದ ಗ್ರಾಮಾಧಿಕಾರಿ ವೈದ್ಯನನ್ನು ಕೋಪದಿಂದ ನೋಡಿ, "ರಕ್ತದ ಒತ್ತಡ ಬಂದರೆ ಚಿಕಿತ್ಸೆಗೆ ನೂರು ವರಹ ಖರ್ಚಾಗುತ್ತೇನು? ಅಷ್ಟು ದೊಡ್ಡ ಮೊತ್ತ ಕೇಳುವುದನ್ನು ನಾನು ಸಹಿಸಲಾರೆ" ಎಂದನು.

ವೈದ್ಯನು ಅತ್ಯಂತ ವಿನಯದಿಂದ, "ಅಜೀರ್ಣಕ್ಕೆ ಚಿಕಿತ್ಸೆ ಮಾಡಿದ್ದಕ್ಕೆ ತಾವು ನನಗೆ ಐವತ್ತು ವರಹ ಕೊಟ್ಟಿದ್ದೀರಿ. ಅದು ನ್ಯಾಯವೆಂದು ಕೂಡಾ ನೀವು ಭಾವಿಸಿದ್ದೀರಿ. ಅಜೀರ್ಣವ್ಯಾಧಿ ಒಂದೆರಡು ದಿನದೊಳಗೆ ಹೋಗಿಬಿಡುತ್ತದೆ. ಆದರೆ ರಕ್ತದ ಒತ್ತಡ ಮಾತ್ರ ಪ್ರಾರಂಭವಾಗಿಬಿಟ್ಟರೆ ಜೀವಿತದ ಅಂತ್ಯದವರೆಗೂ ಪೀಡಿಸುತ್ತದೆ. ಚಿಕಿತ್ಸೆ ಮಾಡದಿದ್ದರೆ ಕೊಂದೇಬಿಡುತ್ತದೆ. ಇಂತಹ ಭಯಂಕರ ವ್ಯಾಧಿಗೆ ನೂಗು ವರಹ ಸಾಕು ಎಂದರೆ ಅದಕ್ಕೆ ಕೋಟಪ್ಪ ಬಡವನಾಗಿರುವುದೇ ಕಾರಣ. ಬರೀ ಔಷಧದ ಖರ್ಚು ಮಾತ್ರವೇ ನಾನು ಹೇಳಿದ್ದು" ಎಂದನು.

ಈಗ ಏನು ಮಾಡುವುದೆಂದು ಗ್ರಾಮಾಧಿಕಾರಿ ಆಲೋಚನೆ ಮಾಡತೊಡಗಿದನು. ಅಷ್ಟರಲ್ಲಿ ಕೋಟಪ್ಪ ಮೆಲ್ಲನೆ ಎದ್ದು ಕುಳಿತು ಪಿಳಿಪಿಳಿ ನೋಡುತ್ತಾ, "ಏನಾಯಿತು?" ಎಂದನು ಆಯಾಸದಿಂದ ತೇಕುತ್ತ.

ವೈದ್ಯನು ಅವನ ಕಿವಿಯ ಹತ್ತಿರ ಗಟ್ಟಿಯಾಗಿ, "ನಿನಗೆ ರಕ್ತದ ಉಕ್ಕು ಬಂತು. ಅದಕ್ಕೆ ಮದ್ದು ಮಾಡಲು ನೂರು ವರಹ ಖರ್ಚಾಗುತ್ತೆ. ನೀನು ಗ್ರಾಮಾಧಿಕಾರಿಗಳಿಗೆ ಐವತ್ತು ವರಹ ಕೊಡಬೇಕಷ್ಟೆ? ಅದನ್ನು ಕಳೆದು ಅವರು ನಿನಗೆ ಐವತ್ತು ವರಹಾ ಕೊಡುತ್ತಾರೆ. ನಾನು ನಿನಗೆ ಮದ್ದು ಕೊಡಲು ನೀನು ಇನ್ನೂ ಐವತ್ತು ವರಹ ಕೊಡಬೇಕು. ಅರ್ಥವಾಯಿತೇ?" ಎಂದು ಒಂದಕ್ಕೆ ಎರಡು ಸಾರಿ ಹೇಳಿದನು.

ಅದನ್ನೆಲ್ಲ ಕೇಳಿ ಕೋಟಪ್ಪ ಎದ್ದುನಿಂತು, ಗ್ರಾಮಾಧಿಕಾರಿಯ ಕಾಲಿಗೆ ಅಡ್ಡ ಬಿದ್ದು, "ತಾವು ಧರ್ಮಪ್ರಭುಗಳು. ಸತ್ತರೂ ಸಾಯುತ್ತೇನೆಯೇ ಹೊರತು ನನ್ನ ಮದ್ದಿಗೆ ನಿಮ್ಮಿಂದ ಹಣ ತೆಗೆದುಕೊಂಡೇನಾ? ನನ್ನ ಕಷ್ಟ ನಾನೇ ನೋಡಿಕೊಳ್ಳುತ್ತೇನೆ. ನನಗೆ ಚಿಕಿತ್ಸೆಯೂ ಬೇಡ, ಮದ್ದೂ ಬೇಡ" ಎಂದು ಅಲ್ಲಿಂದ ಹೊರಟುಹೋದನು.

ಅವಮಾನದಿಂದ ಗ್ರಾಮಾಧಿಕಾರಿಗೆ ಸತ್ತಹಾಗಾಯಿತು. ಆಮೇಲೆ ಅವನು ಯಾರಿಗೂ ಅನ್ಯಾಯಮಾಡಲು ಹೋಗಲಿಲ್ಲ. ಕೋಟಪ್ಪ ಕೂಡಾ, "ಪುಣ್ಯಕ್ಕೆ ಹೋದರೆ ಪಾಪ ಅಡ್ಡ ಬರುತ್ತದೆ" ಎಂಬಂತೆ, ಕೇಳದೆ ಯಾವ ದೊಡ್ಡವರಿಗೂ ಕಾಣಿಕೆ ಕೊಡುವ ಅಭ್ಯಾಸಬಿಟ್ಟನು.



# ನಾರ್ವೇ ಲೆಮಿಂಗ್ಸ್

ಪ್ರತಿ ಮೂರು ನಾಲ್ಕು ವರ್ಷಗಳಿಗೊಮ್ಮೆ ಸಣ್ಣ ಇಲಿ ಜಾತಿಗೆ ಸೇರಿದ ನಾರ್ವೇ ಲೆಮಿಂಗ್ಸ್ ಎಂಬ ಪ್ರಾಣಿಗಳು ತುಂಬ ವಿಚಿತ್ರವಾಗಿ ಪ್ರವರ್ತಿಸುತ್ತವೆ. ತಮ್ಮ ವಾಸಸ್ಥಾನವಾದ ಗುಡ್ಡಗಳ ಕಡೆಯಿಂದ ಹೊರಟು ಮಂದೆ ಮಂದೆಗಳಾಗಿ ಸಮುದ್ರದ ಕಡೆಗೆ ಪ್ರಯಾಣ ಸಾಗಿಸಿ ಸಮುದ್ರ ನೀರಿಗೆ ಹಾರಿ ಮುಳುಗಿ ಹೋಗುವವರೆಗೂ ಈಜಿಕೊಂಡು ಹೋಗುತ್ತವೆ. ಅವು ಏಕೆ ಹಾಗೆ ಮಾಡುತ್ತವೆಂದು ಇನ್ನೂ ಗೊತ್ತಾಗದ ಒಂದು ಪ್ರಕೃತಿ ವಿಚಿತ್ರವಾಗಿಯೇ ಇದೆ.

ಸಾಧಾರಣವಾಗಿ ಒಂದು ಲೆಮಿಂಗ್ ವರ್ಷಕ್ಕೆ ಹತ್ತು ಮರಿಗಳನ್ನು ಇಡುತ್ತದೆ. ಆ ಲೆಕ್ಕಪ್ರಕಾರ ಇವುಗಳ ಸಂಖ್ಯೆ ಎರಡು ಮೂರು ವರ್ಷಗಳಲ್ಲಿ ಸಮೀಪದಲ್ಲಿ ಸಿಗುವ ಆಹಾರ ವಸ್ತುಗಳಿಗಿಂತಲೂ ಎಷ್ಟೋ ಪಾಲು ಹೆಚ್ಚಿಗೆಯೇ ಬೆಳೆದು ಹೋಗುತ್ತವೆ. ಇರುವ ಆಹಾರವು ಸಾಲದೆ ಹೋಗುವುದರಿಂದ ಸಮುದ್ರ ದಾಟಿಯ ತೀರದಲ್ಲಿ ಆಹಾರವಿರುವುದೆಂಬ ಆಶೆಯಿಂದ ಪಯಣಸಾಗಿಸಿ ಹೀಗೆ ಮುಳುಗಿ ಹೋಗುತ್ತಾ ಇರುತ್ತವೆಂದು ಕೆಲವರು ಊಹಿಸುತ್ತಾರೆ.

ನಾರ್ವೇಯಲ್ಲಿ ಪರ್ವತ ಶ್ರೇಣಿಗಳು ಸಮುದ್ರಕ್ಕೆ ಸ್ವಲ್ಪ ಹತ್ತಿರವಾಗಿಯೇ ಇರುತ್ತವೆ. ಲೆಮಿಂಗ್ಸ್ ಹಾಗೆ ಪ್ರಯಾಣ ಹೊರಟಾಗ ಹಗಲು ಹೊತ್ತಿನಲ್ಲಿ ಆಹಾರ ಹುಡುಕುತ್ತಲೂ, ನಿದ್ದೆ ಮಾಡುತ್ತಲೂ, ರಾತ್ರಿ ಹೊತ್ತಿನಲ್ಲಿ ಸಮುದ್ರದ ಕಡೆಗೆ ತಮ್ಮ ಪ್ರಯಾಣ ಸಾಗಿಸುತ್ತವೆ. ದಾರಿಯಲ್ಲಿ ಎಷ್ಟು ಅಡೆತಡೆಗಳು, ತೊಂದರೆಗಳು ಬಂದರೂ ಅವುಗಳನ್ನು ಒಗ್ಗಟ್ಟಿನಿಂದ ಇದಿರಿಸಿ ದಾಟಿಕೊಂಡು ಮುಂದಕ್ಕೆ ನಡೆಯುತ್ತವೆ. ದಾರಿಯಲ್ಲಿ ಪಕ್ಷಿಗಳೂ, ಪ್ರಾಣಿಗಳೂ ಇವುಗಳನ್ನು ಸುಲಭವಾಗಿ ಹಿಡಿದು ಎತ್ತಿಕೊಂಡು ಹೋಗುತ್ತವೆ. ಹಾಗೆ ಹೋಗಲಾಗಿ ಉಳಿದವುಗಳು ಗುಂಪುಗುಂಪಾಗಿ ಮುಂದಕ್ಕೆ ನಡೆಯುತ್ತವೆ.

ಗುಂಡಗಿನ ತಲೆ, ಚಿಕ್ಕ ಕಾಲುಗಳು, ಗಿಡ್ಡ ಬಾಲ, ಹೀಗಿರುವ ಈ ಲೆಮಿಂಗ್ಸ್ ಜಾತಿಯ ಪ್ರಾಣಿಗಳು ಉತ್ತರ ಐರೋಪಾ, ಏಷ್ಯಾ, ಅಮೆರಿಕಾ ಖಂಡಗಳಲ್ಲಿ ಇವೆಯಾದರೂ, ನಾರ್ವೇಯಲ್ಲಿ ಬಹಳ ಹೆಚ್ಚಾಗಿವೆ. ಎಳೆ ಚಿಗುರು, ಹುಲ್ಲು, ಎಲೆಗಳು ಮರದ ಕಿತ್ತೆಗಳನ್ನು ತಿನ್ನುವ ಈ ಜಂತುಗಳನ್ನು ಹದ್ದುಗಳೂ, ಗೂಗೆಗಳೂ, ನರಿಗಳೂ, ತೋಳಗಳೂ ಮೊದಲಾದುವುಗಳು ಬೇಟೆಯಾಡಿ ಹಿಡಿದು ತಿನ್ನುತ್ತವೆ. ಆದುದರಿಂದ ಈ ಸಾಧು ಜಂತುಗಳ ಬದುಕು ದಿನ ದಿನ ಗಂಡವಾಗಿಯೇ ಇದೆ.



ಬೇಸಗೆಯಲ್ಲಿ ನೆಲದ ಮೇಲೆ ಕನ್ನಗಳನ್ನೂ, ಬಿಲಗಳನ್ನೂ ಕೊರೆದುಕೊಂಡು ಜೀವಿಸುವ ಈ ಪ್ರಾಣಿಗಳು ಚಳಿಗಾಲದಲ್ಲಿ ಬೇಕಾದಷ್ಟು ಆಹಾರಗಳನ್ನು ಕೂಡಿಟ್ಟುಕೊಂಡು ಹಿಮಗಡ್ಡೆಗಳ ಕೆಳಗೆ ಹೊರಟು ಹೋಗುತ್ತವೆ. ಇವುಗಳಲ್ಲಿ ಒಂದು ಬಗೆಯ ಜಂತುಗಳಿಗೆ ಪ್ರತಿ ಚಳಿಗಾಲದಲ್ಲಿ ಕಾಲುಗಳಿಗೆ ಬಲವಾದ ಉಗುರುಗಳು ಹುಟ್ಟಿಕೊಳ್ಳುತ್ತವೆ. ಅವು ಬಿಲಗಳನ್ನು ತೋಡಿಕೊಳ್ಳಲು ಉಪಯೋಗವಾಗುತ್ತವೆ.

## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. C. Morabad



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಸೆಪ್ಟೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಜುಲೈ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಪಿಪ್ಪಿಪ್ಪೀ ನಿಲ್ಲೋ, ಕಿವಿ ಕೆಪ್ಪಾದೀತು !

ಎರಡನೇ ಫೋಟೋ : ಅಪ್ಪಪ್ಪ! ಸಾಕಿನ್ನು ಠಪ್ ಅಂದೀತು !

ಕಳುಹಿಸಿದವರು : ಉಷಾ ಬಾಲಕೃಷ್ಣರಾವ್, ಬೆಟ್ಟಿನ ಮನೆ, ೫೭೪ ೧೧೮

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಪೈಥಾಗರಸ್. ೨. ಎರಟೋಸ್ತೆನಿಸ್. ೩. ಧ್ರುವ ಪ್ರಾಂತಗಳಲ್ಲಿ ಭೂಮ್ಯಾಕರ್ಷಣ ಶಕ್ತಿ ಹೆಚ್ಚು. ೪. ರೋಟರ್‌ಡಾಮ್ ರೇವು ಪಟ್ಟಣ. ೫. ಆಸ್ಟ್ರೇಲಿಯಾದಲ್ಲಿರುವ ಮರುಭೂಮಿ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor : NAGI REDDI.